*The Department of Public Instruction Bombay.*

AN

# ELEMENTARY GEOGRAPHY

## PART I

## DESCRIPTION

OF

## THE BOMBAY PRESIDENCY

BY

VENKAT RANGO KATTI,

*Kanarese Translator, Ed. D.*

Tenth Edition, 20,000 Copies.



1917.

A. R. SAVANT,

*Publisher*, BELGAUM.

Price: 1 A. 6 P.

ಂಬಯಿ ಇಲಾಖೆಯೊಳಗಿನ ಸರಕಾರೀ ವಿದ್ಯಾಶಾಲಾಖಾತೆ

# ಭೂಗೋಲ-ವಿದ್ಯದ

# ೂಲತತ್ವಗಳು.

೧ ನೇ ಭಾಗ.

## ುಂಬಯಿ ಇಲಾಖೆಯ ವರ್ಣನೆ.

ವೆಂಕಟ ರಂಗೋ ಕಟ್ಟಿ
ಟ್ರಾನ್ಸಲೇಟರ ಇವರು ಭಾಷಾಂತರಿಸಿದ್ದು.

೧ನೇಯಾವೃತ್ತಿ,- ೨೦,೦೦೦ ಪ್ರತಿಗಳು.






. ಸಾವಂತ,
ಪಬ್ಲಿಶರ, ಬೆಳಗಾಂವ.

ಕ್ರಯ ೧ ಆ. ೬ ಪೈ.

# ಪ್ರಸ್ತಾವನೆಯು.

——:o:——

ಸರಕಾರದವರು ಹೊಸದಾಗಿ ಠರಾಯಿಸಿದ ಇಯತ್ತೆಗಳ ಮೇರೆಗೆ ಕನ್ನಡ ೩ನೇ ಇಯತ್ತೆ ಕಲಿಯುವವರಿಗೆ ಮುಂಬಯಿ ಇಲಾಖೆಯ ಸಾಧಾರಣ ಜ್ಞಾನವನ್ನು ಮಾಡಿಕೊಡುವದು ಅವಶ್ಯವಾಗಿದೆ. ಆದರೆ ಅದನ್ನು ನಕಾಶದ ಮೇಲಿಂದಲೇ ಮಾಡಿಕೊಡುವದು ಬಿಗಿಯಾಗಿರುವದರಿಂದ ಈ ಚಿಕ್ಕ ಪುಸ್ತಕವು ಬರೆಯಲ್ಪಟ್ಟದೆ. ಇದರ ಸಹಾಯದಿಂದ ನಕಾಶವನ್ನು ಕಲಿಸುವದು ಸುಲಭವಾಗುವದು.

ನಕಾಶವನ್ನು ಕಲಿಸುವ ವಿಷಯವಾಗಿ ಮೆಹರ್ಬಾನ ಹೋಪ ಸಾಹೇಬರು ತಾವು ರಚಿಸಿದ ಗುಜರಾಥೀ ಭೂಗೋಲದ ಆರಂಭದಲ್ಲಿ ಕೆಲವು ಸೂಚನೆಗಳನ್ನು ಮಾಡಿರುತ್ತಾರೆ. ಅವು ಬಹಳ ಉಪಯುಕ್ತವಾದದರಿಂದ ಅವನ್ನು ಇಲ್ಲಿ ಕೊಟ್ಟಿರುತ್ತೇವೆ.

ಹುಡುಗರು ಕೂತಿರುವ ಸ್ಥಳದ ನಕಾಶವನ್ನು ಶಿಕ್ಷಕನು ಕರೆ ಹಲಗೆಯ ಮೇಲೆ, ಆ ಹುಡುಗರಿಗೆ ಸೂಚಕ ಪ್ರಶ್ನೆಗಳನ್ನು ಮಾಡುತ್ತಾ ತೆಗೆಯಬೇಕು. ವಿದ್ಯಾರ್ಥಿಗಳ ಸಹಾಯದಿಂದ ಆ ನಕಾಶವನ್ನು ಮುಗಿಸಿ, ಅದನ್ನು ಅವರಿಗೆ ಚನ್ನಾಗಿ ತಿಳಿಸಿದ ಬಳಿಕ ಅದರಂಥ ದೊಡ್ಡ ಸ್ಥಳಗಳ ನಕಾಶವನ್ನು ಕಾಗದದ ಮೇಲೆ ಸ್ವಲ್ಪ ಪ್ರದೇಶದೊಳಗೆ ಇದರಂತೆಯೇ ತೆಗೆಯಬಹುದೆಂದು ಶಿಕ್ಷಕನು ವಿದ್ಯಾರ್ಥಿಗಳಿಗೆ ಚನ್ನಾಗಿ ತಿಳಿಸಿಕೊಡಬೇಕು.

ಸದರೀ ಸ್ಥಳದ ಅಗಲಿಗಿಂತ ಉದ್ದಳತೆ ಹೆಚ್ಚಿದ್ದರೆ, ಶಿಕ್ಷಕನು ವರ್ಗಾಕೃತಿಯನ್ನು ಬರೆದು, ಅದು ಸರಿಯಾಗಿದೆಯೋ ಇಲ್ಲವೋ? ಎಂದು ಹುಡುಗರನ್ನು ಕೇಳಬೇಕು, ಮತ್ತು ಅವರ ಕೈಯಿಂದ ಸರಿಯಾದ ಉತ್ತರಗಳನ್ನು ಕೇಳಿಸಿಕೊಂಡು ನಕಾಶದ ಆಕೃತಿಯನ್ನು ತಿದ್ದಬೇಕು. ಹೀಗೆ ಮಾಡುವದರಿಂದ ಅದು ಹುಡುಗರಿಗೆ ನೆಟ್ಟಗೆ ತಿಳಿಯುತ್ತ ಹೋಗುವದು. ಇದೇ ಮೇರೆಗೆ ಹುಡುಗರು ಕೂತ ಸ್ಥಳವು ಚಚ್ಚೌಕು ಇದ್ದರೆ, ಮೊದಲು ಉದ್ದವಾದ ಆಕೃತಿಯನ್ನು ತೆಗೆಯಬೇಕು. ಈ ಬಗೆಯಾಗಿ ಶಿಕ್ಷಕನು ತಾನು ಕಲಿಸುವದು ಹುಡುಗರಿಗೆ ಚನ್ನಾಗಿ ತಿಳಿಯುತ್ತದೆಯೋ ಇಲ್ಲವೋ? ಎಂಬ ಬಗ್ಗೆ ತಾನು ಮನಗಾಣಲಿಕ್ಕೂ ತಾನು ಕಲಿಸಿದ್ದೆಲ್ಲ ಹುಡುಗರ ಮನಸ್ಸಿನಲ್ಲಿ ನೆಲೆಗೊಂಡು ನಿಲ್ಲಲಿಕ್ಕೂ ತಕ್ಕಂಥ ಯುಕ್ತಿಗಳನ್ನು ಯೋಜಿಸುತ್ತ ಹೋಗಬೇಕು. ಇಷ್ಟಾದ ಬಳಿಕ ನಾಲ್ಕೂ ದಿಕ್ಕುಗಳನ್ನು ಅವರಿಗೆ ತಿಳಿಸಿ ಹೇಳಬೇಕು.

ಬಳಿಕ ಶಾಲೆಯ ಸುತ್ತುಮುತ್ತು ಒಂದೊಂದು ದಿಕ್ಕಿನಲ್ಲಿ ಇರುವ ಕೆಲ ಕೆಲವು ಮನೆಗಳನ್ನು ಕರಹಲಗೆಯ ಮೇಲೆ ತೋರಿಸಿ, ಒಂದು ಬೀದಿಯ ನಕಾಶವನ್ನು ಮುಗಿಸಬೇಕು. ಆ ನಕಾಶವು ಹುಡುಗರಿಗೆ ತಿಳಿದ ಬಳಿಕ ಅದನ್ನು ಅಳಿಸಿ, ಅದನ್ನೇ ಸಣ್ಣದು ಮಾಡಿ ಪುನಃ ತೆಗೆದು ಅದಕ್ಕೆ ಹೊಂದಿರುವ ಕೆಲವು ದೊಡ್ಡ ಬೀದಿಗಳನ್ನು ತೋರಿಸಬೇಕು. ಈ ಪ್ರಕಾರ ಬೆಳಸುತ್ತಾ ಬೆಳಸುತ್ತಾ ಯಾವತ್ತು ಗ್ರಾಮದ ನಕಾಶವನ್ನು ತೆಗೆಯಬೇಕು. ಊರ ಸುತ್ತುಮುತ್ತು ಕೋಟೆ ಇದ್ದರೆ, ಅದನ್ನು ಗೆರೆಕೊರೆದು ತೋರಿಸಬೇಕು. ಈ ನಕಾಶವು ಹುಡುಗರಿಗೆ ಚನ್ನಾಗಿ ತಿಳಿಯಿತೆಂದರೆ, ಅದನ್ನು ಅಳಿಸಿ, ಇದನ್ನೇ ಸಣ್ಣದು ಮಾಡಿ ಬರೆದು, ಅದರೊಳಗೆ ಮುಖ್ಯ ಮುಖ್ಯ ಪ್ರದೇಶಗಳನ್ನು ತೋರಿಸಬೇಕು.

ಬಳಿಕ ಆ ನಕಾಶಕ್ಕೆ ಹುಡುಗರಿಗೆ ಗೊತ್ತಿದ್ದಂಥ ಸುತ್ತುಮುತ್ತಿನ ಗ್ರಾಮಗಳನ್ನು ಜೋಡಿಸಬೇಕು. ತರುವಾಯ ಆ ಬರೆದ ಗ್ರಾಮಗಳ ಆಚೇಕಡೆಗೆ ಪ್ರತಿ ಒಂದು ದಿಕ್ಕಿನಲ್ಲಿ ಇರುವ ಗ್ರಾಮಗಳ ಹೆಸರುಗಳನ್ನು ಹುಡುಗರಿಗೆ ಕೇಳಬೇಕು. ಅವರು ಸರಿಯಾಗಿ ಹೇಳದಿದ್ದರೆ, ಅವರ ತಪ್ಪುಗಳನ್ನು ತಿದ್ದಬೇಕು. ತರುವಾಯ ಅಂತರವೆಂದರೇನೆಂಬದನ್ನು ಅವರಿಗೆ ತಿಳಿಸಿಹೇಳಬೇಕು. ಸುತ್ತುಮುತ್ತಿನ ಊರುಗಳ ಹೆಸರುಗಳನ್ನು ಕ್ರಮವಾಗಿ ಅವವುಗಳ ಅಂತರದ ಪ್ರಮಾಣದಂತೆ ಬರೆಯಬೇಕು. ಅಂದರೆ ದೊಡ್ಡ ನಕಾಶಗಳಲ್ಲಿ ಬೇರೆ ಬೇರೆ ಗ್ರಾಮಗಳ ನಡುವೆ ತೋರಿಸಲ್ಪಟ್ಟ ಅಂತರವು ನಿರರ್ಥಕವಾದದ್ದಲ್ಲೆಂದು ಹುಡುಗರಿಗೆ ತಿಳಿಯುವದು.

ಇದೇ ಮೇರೆಗೆ ಆ ಊರ ನೆರೆಯಲ್ಲಿರುವ ದಿನ್ನೆಗಳನ್ನೂ ಕೆರೆಗಳನ್ನೂ ಹೊಳೆಗಳನ್ನೂ ಬೇರೆ ಸಂಗತಿಗಳನ್ನೂ ಆ ನಕಾಶದಲ್ಲಿ ತೋರಿಸಬೇಕು. ಶಾಲೆ ಇರುವ ತಾಲೂಕಿನ ಇಲ್ಲವೆ ಜಿಲ್ಹೆಯ ನಕಾಶವನ್ನು ಇದೇ ಪ್ರಕಾರ ತೆಗೆದು, ಅದನ್ನು ಸರಿಯಾಗಿ ತಿಳಿಸಿಕೊಟ್ಟ ಬಳಿಕ ಅದರ ಸ್ಥಳದಲ್ಲಿ ಅದರದೇ ಸಣ್ಣದೊಂದು ಆಕೃತಿಯನ್ನು ತೆಗೆದು ಶಿಕ್ಷಕನು ಅದಕ್ಕೆ ಮತ್ತೊಂದು ತಾಲೂಕು ಜೋಡಿಸಿ, ಅದರ ದಿಕ್ಕುಗಳನ್ನೂ ಮೇರೆಗಳನ್ನೂ ತೋರಿಸಬೇಕು. ಬಳಿಕ ಆ ಎರಡನೇ ತಾಲೂಕನ್ನಷ್ಟೇ ದೊಡ್ಡದಾಗಿ ಬರೆದು ಅದರೊಳಗಿನ ಸಣ್ಣ ಪುಟ್ಟ ಸಂಗತಿಗಳನ್ನು ಬರೆಯಬೇಕು.

ಈ ಬಗೆಯಾಗಿ ಯಾವತ್ತು ಜಿಲ್ಹೆಯ ನಕಾಶವನ್ನು ಹುಡುಗರಿಗೆ ಕಲಿಸಬೇಕು. ಆದರೆ ಶಾಲೆ ಇರುವ ತಾಲೂಕಿನ ಹೊರ್ತು ಬೇರೆ ತಾಲೂಕುಗಳೊಳಗಿನ ಸಣ್ಣ ಸಣ್ಣ ಸಂಗತಿಗಳನ್ನು ತಿಳಿಸಬಾರದು. ಪ್ರದೇಶದ ಮಾನದಿಂದ ನಕಾಶವು ಬೆಳೆಯುತ್ತ ಹೋದ ಹಾಗೆ ವಿವರಗಳನ್ನು ಕಡಿಮೆ ಮಾಡಬೇಕು. ನಕಾಶದಲ್ಲಿ

ಹೊಳೆಗಳು ಡೊಂಕೆ ಗೆರೆಗಳಿಂದಲೂ, ಕೆರೆಗಳು ವರ್ತುಳದಿಂದಲೂ ಗ್ರಾಮಗಳು ಪೂಜಿಗಳಿಂದಲೂ ತೋರಿಸಲ್ಪಟ್ಟಿರುತ್ತವೆಂಬದನ್ನು ಹುಡುಗರಿಗೆ ತಿಳಿಸಿ ಹೇಳಬೇಕು.

ಇದರಂತೆಯೇ ಬೇರೆ ಸಂಗತಿಗಳನ್ನು ತಿಳಿಸಬೇಕು. ಯಾವತ್ತು ಜಿಲ್ಲೆಗಳನ್ನೂ ಸಂಸ್ಥಾನಗಳನ್ನೂ ಒಟ್ಟುಗೂಡಿಸಿದರೆ, ಯಾವತ್ತು ದಕ್ಷಿಣ ಮಹಾರಾಷ್ಟ್ರದೇಶದ ಜ್ಞಾನವು ಹುಡುಗರಿಗೆ ಆಗುವದು. ದಕ್ಷಿಣ ಮಹಾರಾಷ್ಟ್ರಕ್ಕೆ ಮಹಾರಾಷ್ಟ್ರಮುಂತಾದ ಬೇರೆ ಭಾಗಗಳನ್ನು ಕೂಡಿಸಿ, ಮುಂಬಯಿ ಇಲಾ[illegible]ಸ್ವರೂಪವನ್ನು ತಿಳಿಸಿಕೊಡಬೇಕು; ಆದರೆ ಮಹಾರಾಷ್ಟ್ರ ಹಾಗೂ ಬೇರೆ ಭಾಗಗಳ ವಿವರನ್ನು ದಕ್ಷಿಣ ಮಹಾರಾಷ್ಟ್ರದ ವಿವರಕ್ಕಿಂತ ಕಡಿಮೆ ತಿಳಿಸಬೇಕು.



# ಅನುಕ್ರಮಣಿಕೆಯು.


ಪುಟ.

ಪೀಠಿಗೆ ದಿಕ್ಕುಗಳು ... ... ... ... ೧

ಭಾಗ ೧.

ಪ್ರಕರಣ ೧. ಸಾಧಾರಣ ವಿವರಣೆ ... ... ೩

" ೨. ಇಲಾಖೆಯ ವಿಭಾಗಗಳು ... ... ೧೨

" ೩. ರಾಜ್ಯವಾಳುವ ರೀತಿಯು ... ... ೧೭

" ೪. ಮುಂಬಯಿ ದ್ವೀಪವೂ ಪಟ್ಟಣವೂ ... ೨೨

ಭಾಗ ೨.

ಸಿಂಧ ಪ್ರಾಂತವು ... ... ... ... ೨೫

ಭಾಗ ೩.

ಕಚ್ಛ ... ... ... ... ... ೨೯

ಭಾಗ ೪.

ಗುಜರಾಥ ... ... ... ... ... ೩೧

ಭಾಗ ೫.

ಗುಜರಾಥದ ಸಂಸ್ಥಾನಗಳು ... ... ... ೩೭

ಭಾಗ ೬.

ಕೊಂಕಣ ... ... ... ... ... ೪೪

ಭಾಗ ೭.

ದೇಶ ... ... ... ... ... ೪೮

ಭಾಗ ೮.

ದಕ್ಷಿಣ ಮಹಾರಾಷ್ಟ್ರದೇಶವೂ ಕಾನಡಾ ಜಿಲ್ಹೆಯೂ (ಮುಂಬಯಿ—ಕರ್ನಾಟಕ) ... ... ... ೫೭

# ಮುಂಬಯಿ ಇಲಾಖೆಯ ವರ್ಣನೆ.



## ಪೀಠಿಕೆ.

### ದಿಕ್ಕುಗಳು.




ಶಿಕ್ಷಕನು ಕರಿಯ ಹಲಗೆಯ ಮೇಲೆ ಆಕೃತಿಯನ್ನು ತೆಗೆದು ದಿಕ್ಕುಗಳನ್ನು ತಿಳಿಸಿಕೊಡಬೇಕು.

ಸೂರ್ಯನು ಹುಟ್ಟುವ ದಿಕ್ಕು ಪೂರ್ವವು. ಸೂರ್ಯನು ಮುಳುಗುವ ದಿಕ್ಕು ಪಶ್ಚಿಮವು. ಪೂರ್ವಕ್ಕೆ ಮೋರೆ ಮಾಡಿ ನಿಂತರೆ, ಬಲಗಡೆ ಆಗುವ ದಿಕ್ಕು ದಕ್ಷಿಣವೆಂತಲೂ, ಎಡಗಡೆ ಆಗುವ ದಿಕ್ಕು ಉತ್ತರವೆಂತಲೂ ಹೇಳಬೇಕು.

ಪೂರ್ವ ದಕ್ಷಿಣಗಳ ನಡುವಿನ ಮೂಲೆ ಆಗ್ನೇಯವು; ದಕ್ಷಿಣ ಪಶ್ಚಿಮಗಳ ನಡುವಿನ ಮೂಲೆ ನೈಋತ್ಯವು; ಪಶ್ಚಿಮ ಉತ್ತರಗಳ ನಡುವಿನ ಮೂಲೆ ವಾಯುವ್ಯವು; ಉತ್ತರ ಪೂರ್ವಗಳ ನಡುವಿನ ಮೂಲೆ ಈಶಾನ್ಯವು.

ನಕಾಶಗಳಲ್ಲಿ ಅವುಗಳ ಮೇಲ್ಭಾಗವೇ ಉತ್ತರವೆಂತಲೂ, ಬಲ ಭಾಗವೇ ಪೂರ್ವವೆಂತಲೂ ಬುಡವೇ ದಕ್ಷಿಣವೆಂತಲೂ, ಎಡ ಭಾಗವೇ ಪಶ್ಚಿಮವೆಂತಲೂ ತಿಳಿಸಿ ಹೇಳಬೇಕು.

---

## ಭೂಗೋಲ ವಿದ್ಯದೊಳಗಿನ ಶಬ್ದಗಳ ವ್ಯಾಖ್ಯೆಗಳು.

### ನೆಲದ ಭಾಗಗಳು.

ಎಲ್ಲ ದಿಕ್ಕುಗಳಲ್ಲಿ ನೀರು ಸುತ್ತುಗಟ್ಟಿದಂಥ ನೆಲವು ದ್ವೀಪವೆಂತಲೂ ನಡುಗಡ್ಡೆ ಎಂತಲೂ ಹೇಳಲ್ಪಡುತ್ತದೆ.

ಒಂದು ದಿಕ್ಕು ಮಾತ್ರ ಹೊರ್ತಾಗಿ ಉಳಿದ ಯಾವತ್ತು ದಿಕ್ಕುಗಳಲ್ಲಿ ನೀರುಳ್ಳ ನೆಲದ ಭಾಗಕ್ಕೆ ದ್ವೀಪಕಲ್ಪವೆಂತಲೂ ಅರ್ಧದ್ವೀಪವೆಂತಲೂ ಅನ್ನುತ್ತಾರೆ.

ಭೂಮಿಯ ಎತ್ತರವಾದ ಭಾಗಕ್ಕೆ ದಿನ್ನಿ ಅನ್ನುತ್ತಾರೆ. ಅಗಲು ಕಡಿಮೆಯಾಗಿ, ಎತ್ತರವಾಗಿ ಬೆಳೆದಂಥ ಭೂಭಾಗಕ್ಕೆ ಗುಡ್ಡವೆನ್ನುತ್ತಾರೆ. ಗುಡ್ಡವು ಬಹಳ ದೊಡ್ಡದಿದ್ದರೆ ಅದಕ್ಕೆ ಪರ್ವತವೆಂತಲೂ ಬೆಟ್ಟವೆಂತಲೂ ಅನ್ನುವರು. ಬೆಟ್ಟಗಳು ಬುಡದಲ್ಲಿ ಒಂದಕ್ಕೊಂದು ಹೊಂದಿಕೊಂಡಿದ್ದರೆ ಅವುಗಳಿಗೆಲ್ಲ ಕೂಡಿ ಪರ್ವತಾವಳಿ ಅನ್ನುತ್ತಾರೆ.

ಎರಡು ಪರ್ವತಗಳ ನಡುವೆ ತಗ್ಗಾಗಿದ್ದ ಪ್ರದೇಶಕ್ಕೆ ದರಿ ಎಂತಲೂ ಕಂದರವೆಂತಲೂ ಅನ್ನುತ್ತಾರೆ.

ಗುಡ್ಡಗಳಿಲ್ಲದೆ ವಿಸ್ತಾರವಾಗಿ ಹಬ್ಬಿದಂಥ ನೆಲಕ್ಕೆ ಬೈಲೆನ್ನುತ್ತಾರೆ. ಎತ್ತರವಾದ ಬೈಲಿಗೆ ತಪ್ಪಲೆನ್ನುತ್ತಾರೆ.

ನೀರು ನಾಲ್ಕೂ ಕಡೆಗೂ ಹರಿದು ಹೋಗುವ ಎತ್ತರವಾದ ಪ್ರದೇಶಕ್ಕೆ ಜಲಚ್ಛೇದವೆನ್ನುತ್ತಾರೆ.

---

## ನೀರಿನ ಭಾಗಗಳು.

ಭೂಮಿಯ ಮೇಲೆ ವಿಸ್ತಾರವಾಗಿ ಹಬ್ಬಿದ ಉಪ್ಪು ನೀರಿನ ಸಂಚಯದಲ್ಲಿ ಮಹಾಸಾಗರಗಳೆಂಬ ೫ ಭಾಗಗಳು ಕಲ್ಪಿಸಲ್ಪಟ್ಟವೆ.

ನೆಲಕ್ಕೆ ಹೊಂದಿದಂಥ, ಮಹಾಸಾಗರಕ್ಕಿಂತ ಸಣ್ಣದಾದಂಥ ಜಲಸಂಚಯಕ್ಕೆ ಸಮುದ್ರವೆನ್ನುತ್ತಾರೆ.

ಒಂದು ದಿಕ್ಕು ಹೊರ್ತಾಗಿ ಮಿಕ್ಕ ಎಲ್ಲ ದಿಕ್ಕುಗಳಲ್ಲಿ ನೆಲವು ಸುತ್ತುಗಟ್ಟಿದಂಥ ವಿಸ್ತಾರವಾದ ನೀರಿನ ಭಾಗಕ್ಕೆ ಉಪಸಾಗರವೆನ್ನುವರು.

ನೆಲದೊಳಗೆ ದೂರದ ವರೆಗೆ ಸೇರಿದಂಥ ಸಮುದ್ರದ ಭಾಗಕ್ಕೆ ಅಖಾತವೆನ್ನುತ್ತಾರೆ.

ಎಲ್ಲ ದಿಕ್ಕುಗಳಲ್ಲಿ ನೆಲವು ಸುತ್ತುಗಟ್ಟಿದಂಥ ನೀರಿಗೆ ಸರೋವರವೆನ್ನುತ್ತಾರೆ.

ಪರ್ವತದಿಂದಾಗಲಿ ಸರೋವರದಿಂದಾಗಲಿ ಹೊರಟು ಇಳಿಜಾರು ನೆಲದ ಮೇಲಿಂದ ಹರಿಯುವ ನೀರಿನ ದೊಡ್ಡ ಪ್ರವಾಹಕ್ಕೆ ಹೊಳೆ ಎನ್ನುತ್ತಾರೆ. ಪ್ರವಾಹವು ಚಿಕ್ಕದಿದ್ದರೆ ಅದಕ್ಕೆ ಹಳ್ಳವೆನ್ನುತ್ತಾರೆ.

ಹೊಳೆ ಹೊರಡುವ ಸ್ಥಳವು ಅದರ ಉಗಮವು; ಅದು ಸಮುದ್ರಕ್ಕೆ ಕೂಡುವ ಸ್ಥಳವು ಅದರ ಮುಖವು; ಎರಡು ಹೊಳೆಗಳು ಒಂದಕ್ಕೊಂದು ಕೂಡುವ ಸ್ಥಳವು ಸಂಗಮವು.

ಸಮುದ್ರದ ಭರತಿಯ ನೀರು ಒಳನುಗ್ಗುವಷ್ಟು ಅಗಲವಾಗಿರುವ ನದಿಯ ಮುಖಕ್ಕೆ ಒತ್ತು ಇಲ್ಲವೆ ಖಾಡೀ ಎನ್ನುತ್ತಾರೆ. ಸಮುದ್ರದ ನೀರಿನ ಏರುವಿಕೆಗೆ ಭರತಿ ಅಥವಾ ಭರತವೆಂತಲೂ ಅದರ ಇಳಿಯುವಿಕೆಗೆ ಓಹಟ ಅಥವಾ ಇಳತವೆಂತಲೂ ಅನ್ನುವರು.

---

## ಮುಂಬಯಿ ಇಲಾಖೆಯ ವರ್ಣನೆ.

### ೧ ನೇ ಭಾಗ.

### ೧ನೇ ಪ್ರಕರಣ.

### ಸಾಧಾರಣ ವಿವರಣೆ.

೧. ಹಿಂದುಸ್ಥಾನವೆಂಬ ಅರ್ಧದ್ವೀಪದ ಪಶ್ಚಿಮ ಸಮುದ್ರತೀರದ ಇಕ್ಕಟ್ಟಾದ ಪ್ರದೇಶಕ್ಕೆ ಮುಂಬಯಿ ಇಲಾಖೆಯೆನ್ನುತ್ತಾರೆ. ಹಿಂದುಸ್ಥಾನದ ಪಶ್ಚಿಮ ದಂಡೆಯಲ್ಲಿ ⅔ ಭಾಗವು ಈ ಇಲಾಖೆಗೆ ಸೇರಿರುತ್ತದೆ. ಈ ಧಡವು ಒಂದೇ ಸಮನಾಗಿ ಇರುತ್ತದೆ; ಕಚ್ಛ-ಖಂಬಾಯತಗಳ ಆಖಾತಗಳಿಂದಲ್ಲದೆ ಬೇರೆ ಎಲ್ಲಿಯೂ ವಿಚ್ಛಿನ್ನವಾಗಿಲ್ಲ. ಇವೆರಡು ಆಖಾತಗಳ ನಡುವೆ ಕಾಠ್ಯಾವಾಡದ ದ್ವೀಪಕಲ್ಪ ಉಂಟು. ಈ ಇಲಾಖೆಯ ವಾಯುವ್ಯ, ಉತ್ತರ, ಈಶಾನ್ಯ ದಿಕ್ಕುಗಳಲ್ಲಿ ಬಲೂಚಿಸ್ಥಾನ, ಪಂಜಾಬ, ರಜಪೂತಸ್ಥಾನದ ಸಂಸ್ಥಾನಗಳು; ಪೂರ್ವದಿಕ್ಕಿಗೆ ಮಧ್ಯ ಹಿಂದುಸ್ಥಾನದ ಸಂಸ್ಥಾನಗಳು; ಮಧ್ಯಪ್ರಾಂತ (ಸೆಂತ್ರಲ್‌ಪ್ರಾವಿನ್ಸೆಸ್), ವರ್‍ಹಾಡಪ್ರಾಂತ, ನಿಜಾಮೀರಾಜ್ಯ; ದಕ್ಷಿ

ಣಕ್ಕೆ ಮದ್ರಾಸ ಇಲಾಖೆಯೂ, ಮೈಸೂರ ಸಂಸ್ಥಾನವೂ; ಪಶ್ಚಿಮಕ್ಕೆ ಅರಬೀ ಸಮುದ್ರವೂ ಉಂಟು. ಈ ಇಲಾಖೆಯಲ್ಲಿ ೧. ಸಿಂಧ; ೨. ಕಚ್ಛ; ೩. ಗುಜರಾಥ; ೪.ಮಹಾರಾಷ್ಟ್ರ; ೫. ದಕ್ಷಿಣಮಹಾರಾಷ್ಟ್ರ ಮತ್ತು ಕಾನಡಾ ಎಂಬ ಪ್ರಾಂತಗಳು ಇರುತ್ತವೆ.

೨. ಪರ್ವತಗಳು:-ಸಹ್ಯಾದ್ರಿ, ಸಾತಪುಡಾ, ಹಾಲಾ ಎಂಬ ಮೂರು ಮುಖ್ಯ ಪರ್ವತಗಳುಂಟು. ಸಹ್ಯಾದ್ರಿಯು ಅರಬೀ ಸಮುದ್ರತೀರದ ಬಳಿಯಲ್ಲಿ ದಕ್ಷಿಣೋತ್ತರವಾಗಿ ಹಬ್ಬಿದೆ. ಇದಕ್ಕೆ ಪಶ್ಚಿಮಘಟ್ಟವೆನ್ನುತ್ತಾರೆ. ಇದರ ಪಶ್ಚಿಮಕ್ಕಿರುವ ಪ್ರದೇಶಕ್ಕೆ ಕೊಂಕಣವೆಂತಲೂ, ಪೂರ್ವಕ್ಕಿರುವ ಪ್ರದೇಶಕ್ಕೆ ದೇಶವೆಂತಲೂ ಅನ್ನುವರು. ಈ ಪರ್ವತದೊಳಗೆ ಅಲ್ಲಲ್ಲಿ ಹೋಗಿ ಬರುವ ಮಾರ್ಗಗಳು ಬಹಳ ಉಂಟು. ಅವುಗಳಿಗೆ ಘಟ್ಟದ ಮಾರ್ಗಗಳೆನ್ನುವರು. ಅವು ಅನೇಕ ಅವೆ. ಅವುಗಳಲ್ಲಿ ೧೨ ಪ್ರಸಿದ್ಧ ಉಂಟು. ಅವುಗಳ ಹೆಸರುಗಳು— ೧.ಥಳಘಟ್ಟ, ನಾಸಿಕದ ಹತ್ತರ; ೨.ಬೋರಘಟ್ಟ, ಖಂಡಾಳದ ಹತ್ತರ; ೩.ಪಾರಘಟ್ಟ, ಮಹಾಬಳೇಶ್ವರದ ಹತ್ತರ; ೪. ಮಾಳಶಿರಸದಘಟ್ಟ, ಜುನ್ನರದ ಹತ್ತರ; ೫. ವರಂದ್ಯಾಘಟ್ಟ, ಮಹಾಡದ ಮಾರ್ಗದಲ್ಲಿ; ೬. ಕುಂಭಾರಲಿಘಟ್ಟ,ಚಿಪಳೂಣದ ಹತ್ತರ; ೭. ಅಂಜೀಘಟ್ಟ, ಕೊಲ್ಹಾಪುರದಿಂದ ರತ್ನಾಗಿರಿಗೆ ಹೋಗುವ ಮಾರ್ಗದಲ್ಲಿ; ೮. ಅಂಬೋಲೀಘಟ್ಟ, ಬೆಳಗಾವಿಯಿಂದ ವೆಂಗುರ್ಲೆಗೆ ಹೋಗುವ ಮಾರ್ಗದಲ್ಲಿ; ೯. ತಿನೈಘಟ್ಟ, ಬೆಳಗಾವಿಯಿಂದ ಗೋವೆಗೆ ಹೋಗುವ ಮಾರ್ಗದಲ್ಲಿ; ೧೦ ಅರಬೈಲ ಘಟ್ಟ, ಧಾರವಾಡದಿಂದ ಕಾರವಾರಕ್ಕೆ ಹೋಗುವ ಮಾರ್ಗದಲ್ಲಿ; ೧೧. ದೇವೀಮನಿಘಟ್ಟ, ಶಿರಸಿಯಿಂದ ಕುಮಟೆಗೆ ಹೋಗುವ ಮಾರ್ಗದಲ್ಲಿ; ೧೨. ಮಲೆಮನೆಘಟ್ಟ, ಸಿದ್ಧಾಪುರದಿಂದ ಗೇರಸಪ್ಪೆಗೆ ಹೋಗುವ ಮಾರ್ಗದಲ್ಲಿ; ಥಳಘಟ್ಟದ ಹತ್ತರ ಕಳಸೂಬಾಯಿಯೆಂಬದೊಂದು ಬಹು ಎತ್ತರವಾದ ಗುಡ್ಡವುಂಟು. ಅದು ಸಮುದ್ರಕ್ಕಿಂತ ೫,೪೫೦ ಫೂಟು ಎತ್ತರವದೆ;

ಚಾಂದವಡದ ಗುಡ್ಡಗಳು, ಅಜಿಂಟದ ಗುಡ್ಡಗಳು, ಅಹಮ್ಮದ ನಗರದ ಉತ್ತರಕ್ಕಿರುವ ಗುಡ್ಡಗಳು, ಸಾತಾರೆಯು ಹತ್ತರ ಶಂಭುಮಹಾದೇವನಗುಡ್ಡ, ಕೊಲ್ಹಾಪುರದ ಹತ್ತರ ಜೋತಿಬಾ ಎಂಬ ದೇವರ ಗುಡ್ಡ, ಇವೆಲ್ಲ ಸಹ್ಯಾದ್ರಿಯ ಮುಖ್ಯ ಶಾಖೆಗಳು. ಮಹಾಬಳೇಶ್ವರ, ಮಥೇರಾನ, ಸಿಂಹಗಡ, ಪುರಂದರ, ಸಪ್ತಶೃಂಗ, ಅಂಜನೇರಿ ಮುಂತಾದ ಎತ್ತರವಾದ ಸ್ಥಳಗಳುಂಟು. ಅಲ್ಲಿಯ ಹವೆಯೂ ನೀರೂ ನೆಟ್ಟಗಿರುವದರಿಂದ ಶ್ರೀಮಂತರು ಬೇಸಿಗೆಯಲ್ಲಿ ಅಲ್ಲಿ ಹೋಗಿ ಇರುತ್ತಾರೆ. ಸಾತಪುಡಾ ಎಂಬ ಪರ್ವತಾವಳಿಯು ತಾಪೀ ನರ್ಮದಾ ಇವೆರಡು ಹೊಳೆಗಳ ನಡುವೆ ಪೂರ್ವಪಶ್ಚಿಮವಾಗಿ ಹಬ್ಬಿರುತ್ತದೆ. ಹಾಲಾ ಎಂಬ ಪರ್ವತಾವಳಿಯು ಸಿಂಧಪ್ರಾಂತದ ಪಶ್ಚಿಮಕ್ಕೆ ಉಂಟು. ಅದು ದಕ್ಷಿಣೋತ್ತರವಾಗಿ ಹಬ್ಬಿದೆ. ಗುಜರಾಥ ಪ್ರಾಂತದ ಸೀಮೆಯ ಮೇಲೆ ಅಬೂಪಹಾಡ ಎಂಬ ಎತ್ತರವಾದ ಗುಡ್ಡವುಂಟು; ಅದು ಅರವಲಿ ಎಂಬ ಪರ್ವತಾವಳಿಯ ನೈಋತ್ಯ ತುದಿಯು. ಅಲ್ಲಿಯ ಹವೆಯೂ ನೀರೂ ಉತ್ತಮವಾಗಿರುವ ಕಾರಣ ಶ್ರೀಮಂತ ಜನರು ಬೇಸಿಗೆಯಲ್ಲಿ ಅಲ್ಲಿಯೂ ಹೋಗಿ ಇರುತ್ತಾರೆ. ಅಬೂಪಹಾಡದಿಂದ ದಕ್ಷಿಣಕ್ಕೆ ಮಹೀ ನದಿಯವರೆಗೆ ಗುಜರಾಥದ ಪೂರ್ವ ಸೀಮೆಯ ಮೇಲೆ ಒಂದು ಗುಡ್ಡದ ಸಾಲು ಹಬ್ಬಿರುತ್ತದೆ. ನರ್ಮದಾ, ತಾಪೀ, ಇವೆರಡು ಹೊಳೆಗಳ ನಡುವೆ ರಾಜಪಿಂಪಳಾದ ಗುಡ್ಡಗಳುಂಟು. ನರ್ಮದೆಗೂ ಮಹೀನದಿಗೂ ನಡುವೆ ಕೆಲವು ಗುಡ್ಡಗಳುಂಟು. ಅವು ವಿಂಧ್ಯಾದ್ರಿಯ ಶಾಖೆಗಳೆಂದು ಹೇಳಬಹುದು.

೩. ಹೊಳೆಗಳು:—ಸಿಂಧು—ಇದು ತಿಬೇಟದಲ್ಲಿ ಹುಟ್ಟಿ ಕಾಶ್ಮೀರ ಪಂಜಾಬ ಪ್ರಾಂತಗಳಲ್ಲಿ ಹರಿದು ಸಿಂಧ ಪ್ರಾಂತದೊಳಗಿಂದ ನೀಟಾಗಿ ದಕ್ಷಿಣಕ್ಕೆ ಹರಿದು ಅರಬೀ ಸಮುದ್ರಕ್ಕೆ ಕೂಡುತ್ತದೆ. ಇದರ ಥಡದಲ್ಲಿ ೧. ಸಕ್ಕರ, ೨. ಹೈದರಾಬಾದ, ಎಂಬ ಪಟ್ಟಣಗಳು ಉಂಟು. ಇದರ ಉದ್ದಳತೆ ೧,೮೦೦ ಮೈಲು. ಈ ನದಿಯಿಂದ ಎಷ್ಟೋ ಕಾಲಿವೆಗಳನ್ನು ನಾಲ್ಕು

ಕಡೆಗೆ ಬಿಳ್ದಿರುತ್ತಾರೆ. ಅದರಿಂದ ಆ ದೇಶದಲ್ಲಿ ಮಳೆ ಕಡಿಮೆ ಯಾದರೂ ಹೊಲಗಪ್ಪಕ್ಕೆ ಅನುಕೂಲವಾಗಿರುತ್ತದೆ.

ನರ್ಮದಾ:—ಇದು ಮಧ್ಯಪ್ರಾಂತದಲ್ಲಿ ಅಮರಕಂಟಕ ವೆಂಬ ಉನ್ನತ ಪ್ರದೇಶದಲ್ಲಿ ಹುಟ್ಟಿ ಪಶ್ಚಿಮಕ್ಕೆ ೮೦೧ ಮೈಲು ಹರಿದು ಭಡೋಚ ಪಟ್ಟಣದ ಹತ್ತರ ಖಂಬಾಯತದ ಆಖಾತಕ್ಕೆ ಕೂಡುತ್ತದೆ. ಇದರ ಮುಖದಿಂದ ೧೦೦ ಮೈಲು ಒಳತನಕ ಸಣ್ಣ ಸಣ್ಣ ಹಡಗಗಳು ನಡೆಯುತ್ತವೆ. ಅದ ರಿಂದ ವ್ಯಾಪಾರಕ್ಕೆ ಸಹಾಯವಾಗುತ್ತದೆ.

ತಾಪಿ.—ಇದು ಸಾತಪುಡಾ ಪರ್ವತಾವಳಿಯಲ್ಲಿ ಬೈತೂ ಲದ ಹತ್ತರ ಹುಟ್ಟಿ ಪಶ್ಚಿಮಕ್ಕೆ ( ೪೪೧ ಮೈಲು ) ಹರಿದು ಸುರತ ಪಟ್ಟಣದ ಹತ್ತರ ಖಂಬಾಯತದ ಆಖಾತಕ್ಕೆ ಕೂಡು ತ್ತದೆ. ಪೂರ್ಣಾ, ಗಿರಣಾ, ಬೋರಿ, ಮಾಂಜರಾ, ಎಂಬ ಸಣ್ಣ ಹೊಳೆಗಳು ಎಡಗಡೆಯಿಂದ ಬಂದು ತಾಪೀ ಹೊಳೆಗೆ ಕೂಡು ತ್ತವೆ. ಗುಜರಾಥದೊಳಗಿನ ಬೇರೆ ನದಿಗಳಗಿಂತ ಈ ನದಿ ಯಿಂದ ವ್ಯಾಪಾರವು ಹೆಚ್ಚಾಗಿ ನಡೆಯುತ್ತದೆ.

ಸಾಬರಮತಿ.—ಇದು ರಾಜಸ್ಥಾನ ಅಥವಾ ರಜಪೂತ ಸ್ಥಾನದಲ್ಲಿ ಹುಟ್ಟಿ ಗುಜರಾಥದ ಸೀಮೆಯ ಮೇಲಿರುವ ಗುಡ್ಡಗಳೊಳಗಿಂದ ಹರಿದು ಆ ಪ್ರಾಂತದ ಉತ್ತರ ಭಾಗ ದೊಳಗಿಂದ ನೀಟಾಗಿ ದಕ್ಷಿಣಕ್ಕೆ ಹರಿದು ಖಂಬಾಯತದ ಆಖಾತಕ್ಕೆ ಕೂಡುತ್ತದೆ. ಇದರ ಧಡದಲ್ಲಿ ಅಹಮ್ಮದಾಬಾದ ಎಂಬ ಪ್ರಸಿದ್ಧ ವ್ಯಾಪಾರದ ಪಟ್ಟಣ ಉಂಟು.

ಮಹಿ.—ಇದು ಮಾಳವದ ತಪ್ಪಲಿನಲ್ಲಿ ಹುಟ್ಟಿ ಗುಜರಾಥ ಪ್ರಾಂತದ ಸೀಮೆಯ ಮೇಲಿರುವ ಗುಡ್ಡಗಳೊಳಗಿಂದ ಹರಿದು, ಆ ಪ್ರಾಂತದ ಉತ್ತರ ಭಾಗದೊಳಗಿಂದ ದಕ್ಷಿಣಕ್ಕೆ ಹೋಗಿ ಖಂಬಾಯತದ ಆಖಾತಕ್ಕೆ ಕೂಡುತ್ತದೆ; ಇದಕ್ಕೆ ಶೇಢಿ,ವಾತ್ರ ಕ, ಮೇಶ್ವೋ, ಎಂಬ ಸಣ್ಣ ಸಣ್ಣ ಹೊಳೆಗಳು ಕೂಡುತ್ತವೆ.

ಗೋದಾವರಿ.—ಈ ಹೊಳೆಯು ಸಹ್ಯಾದ್ರಿ ಪರ್ವತಾವಳಿ ಯಲ್ಲಿ ತ್ರ್ಯಂಬಕೇಶ್ವರದಲ್ಲಿ ಹುಟ್ಟಿ, ನಾಸಿಕ, ಪೈಠಣಗಳ ಮೇಲಿಂದ ಪೂರ್ವಕ್ಕೆ ನಿಜಾಮೀ ರಾಜ್ಯದೊಳಗಿಂದ ( ೮೯೮

ಮೈಲು) ಹರಿದು, ರಾಜಮಹೇಂದ್ರಿಯ ಹತ್ತರ ಬಂಗಾಲದ ಉಪಸಾಗರಕ್ಕೆ ಏಳು ಮುಖದಿಂದ ಕೂಡುತ್ತದೆ. ಇದಕ್ಕೆ ಬಲಗಡೆಯಿಂದ ಪ್ರವರಾ, ಮಾಂಜರಾ, ಪೂರ್ಣಾ ಹಾಗು ಎಡ ಗಡೆಯಿಂದ ಪ್ರಾಣಹಿತಾ, ಇಂದ್ರಾವತಿ, ಎಂಬ ಸಣ್ಣ ಸಣ್ಣ ಹೊಳೆಗಳು ಬಂದು ಕೂಡುತ್ತವೆ. ಪ್ರಾಣಹಿತಾ ನದಿಯು ಪೈನಗಂಗಾ, ವರ್ಧಾ, ವೈನಗಂಗಾ ಎಂಬ ಮೂರು ನದಿ ಗಳಿಂದಾಗಿರುತ್ತದೆ.

ಕೃಷ್ಣಾ.—ಈ ಹೊಳೆಯು ಸಹ್ಯಾದ್ರಿ ಪರ್ವತಾವಳಿಯಲ್ಲಿ ಮಹಾಬಳೇಶ್ವರದಲ್ಲಿ ಹುಟ್ಟಿ, ವಾಯಿ, ಕರ್ಹಾಡ ಪಟ್ಟಣಗಳ ಮೇಲಿಂದ ಹಾಯ್ದು ಬೆಳಗಾವೀ ಜಿಲ್ಹೆಯನ್ನು ಸೇರುತ್ತದೆ. ಅಲ್ಲಿಂದ ಪೂರ್ವವಾಹಿನಿಯಾಗಿ ಬೆಳಗಾಂವ, ವಿಜಾಪೂರ, ಜಿಲ್ಹೆಗಳೊಳಗಿಂದಲೂ ನಿಜಾಮೀ ರಾಜ್ಯದೊಳಗಿಂದಲೂ ಹರಿದು ಮಛಲೀಪಟ್ಟಣದ ಹತ್ತರ ಬಂಗಾಲದ ಉಪಸಾಗರಕ್ಕೆ ಕೂಡುತ್ತದೆ. ಇದರ ಉದ್ದಳತೆ ೮೦೦ ಮೈಲು. ಈ ಹೊಳೆಗೆ ಬಲಗಡೆಯಿಂದ ವೇಣ್ಯಾ, ಕೊಯನಾ, ವಾರಣಾ, ಪಂಚಗಂಗಾ, ಘಟಪ್ರಭಾ, ಮಲಪ್ರಭಾ, ತುಂಗಭದ್ರಾ, ಎಡಗಡೆಯಿಂದ ಡೋಣಿ, ಭೀಮಾ ಎಂಬ ಹೊಳೆಗಳು ಕೂಡುತ್ತವೆ. ಗೋಕಾ ವೀ ಗ್ರಾಮದ ಹತ್ತರಿರುವ ಘಟಪ್ರಭೆಯ ತಡಸಲವು ೨೮೦ ಫೂಟು ಎತ್ತರವದೆ. ಅದು ನೋಟಕ್ಕೆ ಮನೋಹರವಾಗಿದೆ.

ಶರಾವತಿ.—ಇದು ಮೈಸೂರ ಪ್ರಾಂತದಲ್ಲಿ ಹುಟ್ಟಿ ಪಶ್ಚಿ ಮಕ್ಕೆ ಹರಿದು ಹೊನ್ನಾವರದ ಹತ್ತರ ಅರಬೀ ಸಮುದ್ರಕ್ಕೆ ಕೂಡುತ್ತದೆ. ಗೆರಸಪ್ಪೆಯ ಮೇಲ್ಗಡೆಯಲ್ಲಿ ಈ ಹೊಳೆಯು ಬಹು ವೇಗದಿಂದ ಗುಡ್ಡದ ಮೇಲಿಂದ (೮೯೦ ಫೂಟು) ಕೆಳಗೆ ಬೀಳುತ್ತದೆ. ಅದರಿಂದ ಅಲ್ಲಿ ಅನೇಕ ತಡಸಲಗಳಾಗಿರುತ್ತವೆ. ಅವುಗಳಲ್ಲಿ ಭವ್ಯವಾದಂಥ ಮನೋಹರವಾದಂಥಾದ್ದೊಂದು ಧಬೆಧಬೆ ಇರುತ್ತದೆ. ಕೊಂಕಣದೊಳಗಿನ ಹೊಳೆಗಳು ಸಣ್ಣ ವು; ಆದರೂ ಸಮುದ್ರ ಧಡದ ಹತ್ತರದಿಂದ ಬರಹೋಗುವ ಹಡಗಗಳಿಗೆ ಅವುಗಳಿಂದ ಬಂದರದಂತೆ ಉಪಯೋಗವಾ

ಗುತ್ತದೆ.ಇದರ ಹೊರ್ತು ಅವುಗಳ ಮಹತ್ವವು ಬೇರೆ ಏನೂ ಇಲ್ಲ.

೪. ಪಂಜಾಬದ ನೈಋತ್ಯ ಮೂಲೆಯಿಂದ ಮದ್ರಾಸ ಇಲಾಖೆ, ಮೈಸೂರ ಸಂಸ್ಥಾನ ಇವುಗಳ ಮೇರೆಗಳವರೆಗೆ ಮುಂಬಯಿ ಇಲಾಖೆಯ ಉದ್ದಳತೆ ೧,೦೫೦ ಮೈಲು, ಕ್ಷೇತ್ರಫಲ ೧,೨೨,೦೭೧ಚಚ್ಚೌಕು ಮೈಲು.ಇದರಲ್ಲಿ ೨೭,೯೩೭ ಚಚ್ಚೌಕು ಮೈಲು ಸಂಸ್ಥಾನಿಕರ ವಶದಲ್ಲುಂಟು. ಜನಸಂಖ್ಯೆ ಏಡನ್ ಸಹಿತ ಒಟ್ಟು ೨,೫೪,೫೭,೫೫೩. ಇದರಲ್ಲಿ ೬೮,೯೧,೬೯೧ ಜನರು ಸಂಸ್ಥಾನಗಳಲ್ಲಿ ಇರುತ್ತಾರೆ. ಗಾಯಕವಾಡನು ಹೊರ್ತಾಗಿ ಸಂಸ್ಥಾನಿಕರು ಮುಂಬಯಿ ಸರಕಾರದ ಅಧಿಕಾರಕ್ಕೆ ಒಳಗಾಗಿರುತ್ತಾರೆ. ಇವರಲ್ಲಿ ಕೆಲವರು ಮುಂಬಯಿ ಸರಕಾರಕ್ಕೂ ಕೆಲವರು ಗಾಯಕವಾಡ ಸರಕಾರಕ್ಕೂ ಕಪ್ಪ ಕೊಡುತ್ತಾರೆ. ಈ ಸಂಸ್ಥಾನಗಳ ಮೇಲ್ವಿಚಾರಣೆಗಾಗಿ ಇಂಗ್ಲಿಷ ಸರಕಾರದವರ ತರ್ಫೆನಿಂದ ಪೊಲಿಟಿಕಲ್ ಏಜಂಟರಿರುತ್ತಾರೆ. ಕೆಲಕೆಲವು ಸಣ್ಣ ಸಂಸ್ಥಾನಗಳು ನೆರೆಯಲ್ಲಿಯ ಕಲೆಕ್ಟರನ ಇಲ್ಲವೆ ಜಡ್ಜನ ವಶದಲ್ಲಿರುತ್ತವೆ.

೫. ಸಸ್ಯಾದಿಗಳು.—ಸಿಂಧ ಪ್ರಾಂತದಲ್ಲಿ ಅಕ್ಕಿ, ಜೋಳ, ಎಣ್ಣೀಕಾಳುಗಳು, ಸಜ್ಜಿ, ಗೋಧಿ, ಜವೆಗೋಧಿ, ಹೆಸರು, ಹತ್ತಿ, ತಂಬಾಕ; ಕಚ್ಛಪ್ರಾಂತದಲ್ಲಿ ಜೋಳ, ಸಜ್ಜಿ, ಎಣ್ಣೀಕಾಳುಗಳು, ಗೋಧಿ, ಹೆಸರು, ಹತ್ತಿ, ಉಣ್ಣೆ, ಪಟಕ, ಸೋರುಪ್ಪು; ಗುಜರಾಥದಲ್ಲಿ ಅಕ್ಕಿ, ಜೋಳ, ಗೋವಿನ ಜೋಳ, ಎಣ್ಣೀ ಕಾಳುಗಳು,ಸಜ್ಜಿ, ಗೋಧಿ, ಕಡ್ಲಿ, ತೊಗರಿ, ಚಿಲ್ಲರೇ ಕಾಳುಗಳು, ಹತ್ತಿ, ತಂಬಾಕ, ಉಪ್ಪು, ಕುಸಿಬೆ, ಕಬ್ಬು, ಶುಂಠಿ; ದೇಶದಲ್ಲಿ ಅಕ್ಕಿ, ಜೋಳ ಸಜ್ಜಿ, ಗೋಧಿ, ಕಡ್ಲಿ, ತೊಗರಿ, ಹತ್ತಿ, ತಂಬಾಕ, ಕಬ್ಬು, ನೆಲಗಡ್ಲಿ, ಕುಸಿಬೆ, ಮೆಣಸಿನಕಾಯಿ; ಕೊಂಕಣದಲ್ಲಿ ಅಕ್ಕಿ, ಸಾವಕ್ಕಿ, ಉದ್ದು, ಹೆಸರು, ನಾಗಲಿ, ಉಪ್ಪು, ತೆಂಗು, ಅಡಿಕೆ, ಖಾರಗೆಣಸು, ಎಳ್ಳು, ಬಾಳೆ, ಕಬ್ಬು; ದಕ್ಷಿಣ ಮಹಾರಾಷ್ಟ್ರದಲ್ಲಿ (ಮುಂಬ

ಯಿ-ಕರ್ನಾಟಕದಲ್ಲಿ)ಅಕ್ಕಿ,ಜೋಳ,ಎಣ್ಣೇಕಾಳುಗಳು, ಸಜ್ಜಿ, ಗೋಧಿ, ಕಡ್ಲೆ, ತೊಗರಿ, ಹೆಸರು, ಕುಸಿಬೆ, ಹತ್ತಿ, ತಂಬಾಕ, ಕಬ್ಬು; ಕಾನಡಾ ಜಿಲ್ಹೆಯಲ್ಲಿ ಅಕ್ಕಿ, ಕಬ್ಬು, ತೆಂಗು, ಅಡಿಕೆ, ಚಂದನ, ಯಾಲಕ್ಕಿ, ಮೆಣಸು, ಉಪ್ಪು, ಇವು ಹೇರಳವಾಗಿ ಬೆಳೆಯುತ್ತವೆ.

೬. ಉಗೆಬಂಡಿಯ ಮಾರ್ಗಗಳು.—೧ನೇದು, ದಿ ಗ್ರೇಟ ಇಂಡಿಯನ್ ಪೆನಿನ್‍ಸುಲಾ ರೇಲ್ವೆ ಎಂಬ ಮಾರ್ಗವು ಮುಂಬಯಿಯಲ್ಲಿ ಬೋರಿ ಬಂದರದಿಂದ ಹೊರಟು, ಕಲ್ಯಾಣದವರೆಗೆ ಹೋದ ಬಳಿಕ, ಅಲ್ಲಿ ಎರಡು ಮಾರ್ಗಗಳು ಒಡೆಯುತ್ತವೆ. ಒಂದನೇದು ಥಳಘಟ್ಟದ ಮಾರ್ಗವಾಗಿ ನಾಸಿಕ, ಜಬಲಪುರ, ಅಲಹಾಬಾದ, ಕಲಕತ್ತೆ ಈ ಪಟ್ಟಣಗಳ ಕಡೆಗೆ ಹೋಗುತ್ತದೆ; ಅದರದೊಂದು ಶಾಖೆಯು ಭುಸಾವಳದಿಂದ ನಾಗಪುರಕ್ಕೆ ಹೋಗಿದೆ. ಎರಡನೇದು ಬೋರಘಟ್ಟದ ಮಾರ್ಗದಿಂದ ಪುಣೆ, ಸೊಲ್ಲಾಪುರ, ರಾಯಚೂರು, ಇವುಗಳ ಕಡೆಗೆ ಹೋಗುತ್ತದೆ. ೨ನೇದು, ದಿ ಬಾಂಬೆ ಬಡೋದಾ ಅಂಡ್ ಸೆಂಟ್ರಲ್ ಇಂಡಿಯಾ ರೇಲ್ವೆ ಎಂಬ ಮಾರ್ಗವು ಮುಂಬಯಿಯಲ್ಲಿ ಕುಲಾಬೆಯಿಂದ ಹೊರಟು, ಸುರತ, ಬಡೋದೆ, ಅಹಮ್ಮದಾಬಾದ, ವಡವಾಣ, ಎಂಬ ಪಟ್ಟಣಗಳಿಗೆ ಹೋಗಿದೆ. ಇವೆರಡೂ ಮಾರ್ಗಗಳಿಗೆ ವ್ಯಾಪಾರದ ಅನುಕೂಲತೆಗಾಗಿ ಅಲ್ಲಲ್ಲಿಗೆ ಸಣ್ಣ ಸಣ್ಣ ಶಾಖೆಗಳನ್ನು ಮಾಡಿರುತ್ತಾರೆ. ೩ನೇದು, ದಿ ಸಿಂಧ ರೇಲ್ವೆ ಎಂಬ ಮಾರ್ಗವು ಕರಾಚಿಯಿಂದ ಕೋತ್ರಿ, ರಕ, ಸಕ್ಕರ ಇವುಗಳ ಮೇಲಿಂದ ಮುಲ್ತಾನದ ಕಡೆಗೆ ಹೋಗಿದೆ. ಇದರದೊಂದು ಶಾಖೆಯು ರಕದಿಂದ ಶಿಕಾರಪುರ, ಜಾಕೋಬಾಬಾದ, ಕ್ವೇಟಾ ಪಟ್ಟಣಗಳ ಮೇಲಿಂದ ಚಮುನ ತನಕ ಹೋಗಿದೆ. ೪ನೇದು, ದಿ ದೌಂಡ ಮನಮಾಡ ಸ್ಟೇಟ್ ರೇಲ್ವೆಯು ಅಹಮ್ಮದನಗರದ ಹತ್ತರದಿಂದ ಹೊರಟು ಕಲಕತ್ತೆ-ಮದ್ರಾಸಗಳಿಗೆ ಹೋಗುವ ಮಾರ್ಗಕ್ಕೆ ಕೂಡು

ತ್ತದೆ. ೫ನೇದು, ದಿ ಗೋದಾವರಿ ವ್ಹಾಲಿ ಸ್ಟೇಟ ರೇಲ್ವೆಯು ಮನಮಾಡದಿಂದ ಹೊರಟು ದೌಲತಾಬಾದ, ಔರಂಗಾಬಾದ ಇವುಗಳ ಮೇಲಿಂದ ಸಿಕಂದರಾಬಾದದ ತನಕ ಹೋಗಿದೆ. ೬ನೇದು, ದಿ ತಾಪಿ ವ್ಹಾಲಿ ರೇಲ್ವೆಯು ಸುರತದಿಂದ ಹೊರಟು ಸೋನಗ್ಗಡ, ನಂದುರಬಾರ ಇವುಗಳ ಮೇಲಿಂದ ಅಮಳನೇರ ತನಕ ಹೋಗಿದೆ. ೭ನೇದು, ದಿ ರಾಜಪುತಾನಾ ಸ್ಟೇಟ್ ರೇಲ್ವೆಯು ಅಹಮ್ಮದಾಬಾದದಿಂದ ಅಜಮೀರದ ಕಡೆಗೆ ಹೋಗುತ್ತದೆ. ೮ ನೇದು, ದಿ ಭಾವನಗರ ಮತ್ತು ಗೊಂಡಾಲ ಸ್ಟೇಟ್ ರೇಲ್ವೆಯು ವಡವಾಣದಿಂದ ಭಾವನಗರದ ಕಡೆಗೆ ಹೋಗಿದೆ; ಅದರದೊಂದು ಶಾಖೆ ಪಶ್ಚಿಮಕ್ಕೆ ಪೋರಬಂದರದ ತನಕ ಹೋಗಿದೆ. ೯ನೇದು, ದಿ ಸದರ್ನ ಮರಾಠಾ ರೇಲ್ವೆ; ಇದರಲ್ಲಿ ಮೂರು ಶಾಖೆಗಳುಂಟು. ಒಂದು ಸೌಥ ಡೆಕ್ಕನ್ ಎಂಬ ಮಾರ್ಗವು ಕ್ಯಾಸಲ್‌ರಾಕದಿಂದ ಹೊರಟು ಲೊಂಡಾ, ಧಾರವಾಡ, ಹುಬ್ಬಳ್ಳಿ, ಗದಗ, ಬಳ್ಳಾರಿಗಳ ಮೇಲಿಂದ ಮದ್ರಾಸ ರೇಲ್ವೆಯ ಗುಂಟಕಲ್ಲ ಸ್ಟೇಶನ್ನದ ವರೆಗೆ ಹೋಗಿರುತ್ತದೆ. ಈ ಮಾರ್ಗದ ಒಂದು ಶಾಖೆಯು ಹುಬ್ಬಳ್ಳಿಯಿಂದ ಹಾವೇರಿ, ರಾಣೆಬಿನ್ನೂರ, ಹರಿಹರಗಳ ಮೇಲಿಂದ ಹಾಯ್ದು ಮೈಸೂರ ಸ್ಟೇಟ್ ರೇಲ್ವೆಗೆ ಹೋಗಿ ಕೂಡುತ್ತದೆ. ಎರಡನೇದು ಈಸ್ಟ ಡೆಕ್ಕನ್ ಎಂಬ ಮಾರ್ಗವು ಗ್ರೆ. ಇ. ಪೆ. ರೇಲ್ವೆಯ ಮೇಲಿನ ಹುಟಗಿಯಿಂದ ಹೊರಟು ವಿಜಾಪೂರ-ಬಾಗಲಕೋಟೆಗಳ ಮೇಲಿಂದ ಹಾಯ್ದು ಗದಗಿಗೆ ಹೋಗಿದೆ. ಮೂರನೇದು, ವೆಸ್ಟ ಡೆಕ್ಕನ ಎಂಬ ಮಾರ್ಗವು ಪುಣೆಯಿಂದ ಹೊರಟು ಸಾತಾರೆ* ಮಿರಜೆ, ಬೆಳಗಾವಿ ಇವುಗಳ ಮೇಲೆ

---

* ಸಾತಾರೆಯ ಹಾದಿಯ ಸ್ಟೇಶನ್ನವು ಸಾತಾರೆಯೂರಿಂದ ೧೨ ಮೈಲು ದೂರವಿರುತ್ತದೆ.

ಹಾಯ್ದು ಲೋಂಡಾದವರೆಗೆ ಹೋಗಿದೆ. ೧೦ನೇದು, ದಿ ವೆಸ್ಟ ಇಂಡಿಯಾಪೋರ್ತಗೀಜ ರೇಲ್ವೆಯು (ಕ್ಯಾಸಲರಾಕದ ಆಚೆಗೆ) ಗೋವೆಯ ಸರಹದ್ದಿನಿಂದ ಮಾರ್ಮಗಾವ ಎಂಬ ಬಂದರಕ್ಕೆ ಹೋಗಿದೆ. ೧೧ನೇದು, ದಿ ಕೊಲ್ಹಾಪೂರ ಸ್ಟೇಟ ರೇಲ್ವೆಯು ಮಿರಜೆಯಿಂದ ಕೊಲ್ಹಾಪೂರಕ್ಕೆ ಹೋಗುತ್ತದೆ. ೧೨ನೇದು, ದಿ ಬಾರ್ಸಿ ಲಾಯಿಟ ರೇಲ್ವೆಯು ಕುರಡೆವಾಡಿಯಿಂದ ಹೊರಟು ಈಶಾನ್ಯಕ್ಕೆ ಬಾರ್ಸಿಯ ಮೇಲಿಂದ ಲಾತೂರ ವರೆಗೆ ಹೋಗಿದೆ; ಮತ್ತು ನೈಋತ್ಯಕ್ಕೆ ಪಂಢರಪುರದ ಕಡೆಗೆ ಹೋಗಿದೆ.

೭. ನೋಡತಕ್ಕಂಥ ಸ್ಥಳಗಳು:—ಮುಂಬಯಿ ಹತ್ತರ ಘಾರಪುರಿ, ಪುಣೆ ಜಿಲ್ಹೆಯಲ್ಲಿ ಜುನ್ನರ ಮತ್ತು ಕಾರ್ಲೆ, ವಿಜಾಪುರ ಜಿಲ್ಹೆಯಲ್ಲಿ ಬಾದಾಮಿ ಮತ್ತು ನಾಸಿಕ ಎಂಬಲ್ಲಿ ಗುಡ್ಡದೊಳಗೆ ಕೊರೆದ ಗುಡಿಗಳು ನೋಡತಕ್ಕಂಥವವೆ. ಠಾಣೆ ಜಿಲ್ಹೆಯಲ್ಲಿ ವಜ್ರಾಬಾಯಿ ಎಂಬದೊಂದು ದೇವಸ್ಥಾನವದೆ. ಅಲ್ಲಿ ಬಿಸಿ ನೀರಿನ ಸೆಲೆಗಳು ಹರಿಯುತ್ತವೆ. ಅಡಾವದದಲ್ಲಿಯೂ (ಖಾನದೇಶ) ರಾಜಾಪೂರದಲ್ಲಿಯೂ (ರತ್ನಾಗಿರಿ) ಬಿಸಿ ನೀರಿನ ಸೆಲೆಗಳುಂಟು. ರಾಜಾಪೂರದಿಂದೊಂದು ಹರದಾರಿಯ ಮೇಲೆ ಗಂಗಾಸ್ಥಾನವೆಂಬ ಸ್ಥಲವದೆ. ಅಲ್ಲಿ ವರ್ಷ ಎರಡು ವರ್ಷಕ್ಕೊಮ್ಮೆ ಒಂದು ಸೆಲೆಯು ಬಹು ವೇಗದಿಂದ ಹರಿಯುತ್ತದೆ. ಆಗ ಅಲ್ಲಿ ಗಂಗೆ ಬಂತೆಂದು ಸ್ನಾನಕ್ಕೆ ಬಹಳ ಜನರು ಕೂಡುತ್ತಾರೆ. ಇವು ಹೊರ್ತಾಗಿ ದ್ವಾರಕಾ, ಸೋಮನಾಥ, ಡಾಕೂರ, ಪಾಳಿಟೋಣಿ, ತ್ರ್ಯಂಬ

ಕೇಶ್ವರ, ಪಂಢರಪೂರ, ಕೊಲ್ಹಾಪೂರ ಮತ್ತು ಗೋಕರ್ಣ ಇವು ಪ್ರಸಿದ್ಧ ಕ್ಷೇತ್ರಗಳುಂಟು. ಅಹಮ್ಮದಾಬಾದ, ವಿಜಾಪೂರ ಇವೆರಡು ಪೂರ್ವಕಾಲದಲ್ಲಿ ಹೆಸರಾದ ರಾಜಧಾನಿಗಳಿದ್ದವು. ಈ ಪಟ್ಟಣಗಳಲ್ಲಿ ನೋಡತಕ್ಕಂಥ ಭವ್ಯವಾದ ಹಳೇ ಕಟ್ಟಡಗಳು ಹಲವು ಉಂಟು.

---

## ೨ನೇ ಪ್ರಕರಣ.

### ಮುಂಬಯಿ ಇಲಾಖೆಯ ವಿಭಾಗಗಳು.

ಈ ಇಲಾಖೆಯಲ್ಲಿ ಉತ್ತರದಿಂದ, ೧. ಸಿಂಧ, ೨. ಕಚ್ಛ, ೩. ಗುಜರಾಥ, ೪. ಮಹಾರಾಷ್ಟ್ರ, (ಕೊಂಕಣದೇಶ ಸಹಿತ), ೫. ಮುಂಬಯಿ-ಕರ್ನಾಟಕ ಅಥವಾ ದಕ್ಷಿಣ ಮಹಾರಾಷ್ಟ್ರ ಮತ್ತು ಕಾನಡಾ, ಎಂಬ ಐದು ವಿಭಾಗಗಳು ಇರುತ್ತವೆ.

ಮುಂಬಯಿ ಪಟ್ಟಣವು ಈ ಇಲಾಖೆಯ ರಾಜಧಾನಿಯುಂಟು. ಈ ನಡುಗಡ್ಡೆಯನ್ನು ಇಂಗ್ಲಂಡದ ೨ ನೇ ಚಾರ್ಲಸ ರಾಜನಿಗೆ ಪೋರ್ತುಗಾಲದ ಅರಸನು ಸನ್ ೧೬೬೧ ನೇ ಇಸವಿಯಲ್ಲಿ ವರದಕ್ಷಿಣೆಯಾಗಿ ಕೊಟ್ಟನು. ಪೋರ್ತುಗೀಜರ ವಶದಲ್ಲಿ ಈಗ್ಯೂ ದಕ್ಷಿಣದಲ್ಲಿ ಗೋವೆಯ ಪ್ರಾಂತ (ಕ್ಷೇತ್ರ ೨೨೫ ಚಚ್ಚೌಕು ಮೈಲು,) ಸುರತದ ದಕ್ಷಿಣದಲ್ಲಿ ದಮಣ (ಕ್ಷೇತ್ರ ೨೨ ಚಚ್ಚೌಕು ಮೈಲು), ಕಾಠ್ಯಾವಾಡದ ದಕ್ಷಿಣದಲ್ಲಿ ದೀವ ಎಂಬ ಚಿಕ್ಕ ನಡುಗಡ್ಡೆ, ಇವಿಷ್ಟು ಇರುತ್ತವೆ.

ಗುಜರಾಥದಲ್ಲಿ ಬ್ರಿಟಿಶ ಸರಕಾರಕ್ಕೆ ಸೇರಿದ ಸೀಮೆಯು ಗಾಯಕವಾಡನಿಂದ ಒಡಂಬಡಿಕೆಯ ಹಕ್ಕಿಗನುಸಾರವಾಗಿ ಕೊಡಲ್ಪಟ್ಟಿತು. ಪೇಶವಾಯಿ ರಾಜ್ಯವನ್ನು ಮುರಿದು ಮಹಾರಾಷ್ಟ್ರ, ದಕ್ಷಿಣಮಹಾರಾಷ್ಟ್ರಪ್ರಾಂತಗಳನ್ನು ಸನ್ ೧೮೧೮ ನೇ ಇಸವಿಯಲ್ಲಿ ಇಂಗ್ಲಿಷರು ತಕ್ಕೊಂಡರು; ಸನ್ ೧೮೬೧ನೇ ಇಸವಿಯಲ್ಲಿ ಉತ್ತರಕಾನಡಾ ಪ್ರಾಂತವು ಮದ್ರಾಸ ಇಲಾಖೆಯಿಂದ ದೊರಕಿತು. ಸಿಂಧ ಪ್ರಾಂತವನ್ನು ಸರ್ ಜಾರ್ಲಸ್ ನೇಪಿಯರನೆಂಬ ಸರದಾರನು ಅಮೀರರನ್ನು ಗೆದ್ದು ತಕ್ಕೊಂಡನು.

ಮೇಲೆ ಹೇಳಿದ ಐದು ಭಾಗಗಳೊಳಗಿನ ಜಿಲ್ಹೆಗಳೂ, ಸಂಸ್ಥಾನಗಳೂ ಪೊಲಿಟಿಕಲ್ ಏಜನ್ಸಿಗಳೂ, ಇವುಗಳ ಹೆಸರುಗಳೂ ಕ್ಷೇತ್ರಫಲಗಳೂ ☞ ಜನಸಂಖ್ಯೆಗಳೂ, ಮುಖ್ಯಪಟ್ಟಣಗಳೂ ಕೆಳಗೆ ಬರೆದಂತೆ:—

## ೧ ಸಿಂಧ.

| ಜಿಲ್ಹೆ ಅಥವಾ ಸಂಸ್ಥಾನ. | ಕ್ಷೇತ್ರಫಲ. | ಜನಸಂಖ್ಯೆ. | ಮುಖ್ಯ ಪಟ್ಟಣ. |
|---|---|---|---|
| ೧. ಅಪ್ಪರಸಿಂಧ ಫ್ರಂಟಿಯರ. | ೨,೫೪೯ | ೨,೩೨,೪೬೨ | ಜಾಕೋಬಾಬಾದ |
| ೨. ಶಿಕಾರಪುರ. | ೯,೨೯೬ | ೧೦,೧೮,೨೩೭ | ಶಿಕಾರಪುರ |
| ೩. ಹೈದರಾಬಾದ. | ೯,೦೩೩ | ೯,೯೦,೫೮೨ | ಹೈದರಾಬಾದ |
| ೪. ಕರಾಚಿ ಜಿಲ್ಹೆ. | ೧೪,೧೮೨ | ೬,೦೭,೪೩೯ | ಕರಾಚಿ |
| ೫. ಥರಪಾರಕರ. | ೧೨,೭೨೯ | ೩,೬೪,೧೬೮ | ಉಮರಕೋಟಿ |
| ೬. ಖೈರಪುರ ಸಂಸ್ಥಾನ. | ೬,೧೦೯ | ೧,೯೯,೫೬೫ | ಖೈರಪುರ |

☞ ಜನಸಂಖ್ಯೆ ಕ್ಷೇತ್ರಫಲಗಳನ್ನು ಹುಡುಗರ ಕಡೆಯಿಂದ ಪಾಠಮಾಡಿಸ ಬಾರದು.

## ೨. ಕಚ್ಛ ಸಂಸ್ಥಾನ.

| ಜಿಲ್ಹೆ ಅಥವಾ ಸಂಸ್ಥಾನ. | ಕ್ಷೇತ್ರಫಲ. | ಜನಸಂಖ್ಯೆ. | ಮುಖ್ಯ ಪಟ್ಟಣ. |
|---|---|---|---|
| ೧ ಕಚ್ಛ(ರಣದಹೊರ್ತು) | ೬,೧೦೯ | ೪,೮೭,೩೭೪ | ಭೂಜ. |

## ೩. ಗುಜರಾಥ.

| | | | |
|---|---|---|---|
| ೧. ಅಹಮ್ಮದಾಬಾದಜಿ | ೩,೯೪೯ | ೭,೯೫,೦೯೪ | ಅಹಮ್ಮದಾಬಾದ |
| ೨. ಖೇಡಾ ಜಿಲ್ಹೆ | ೧,೬೦೯ | ೭,೧೫,೭೨೫ | ಖೇಡಾ [ದೋಹದ |
| ೩. ಪಂಚಮಹಾಲ | ೧,೬೦೩ | ೨,೬೧,೮೭೦ | ಗೋಧ್ರಾ ಮತ್ತು |
| ೪. ಭಡೋಚ ಜಿಲ್ಹೆ | ೧,೪೬೩ | ೨,೯೧,೪೨೮ | ಭಡೋಚ |
| ೫. ಸುರತ ಜಿಲ್ಹೆ | ೧,೬೬೨ | ೬,೩೬,೬೦೨ | ಸುರತೆ |
| ೬. ಕಾಠ್ಯಾವಾಡ ಏಜನ್ಸಿ | ೨೦,೫೫೯ | ೨೩,೨೭,೪೫೬ | ರಾಜಕೋಟ [ನಪುರ |
| ೭. ಪಾಲನಪುರ ,, | ೭,೭೭೫ | ೪,೬೭,೬೯೧ | ಡೀಸಾ ಮತ್ತು ಪಾಲ |
| ೮. ಮಹಿಕಾಂಠಾ ,, | ೯,೩೦೦ | ೩,೬೧,೫೦೮ | ಸಾದ್ರ ಮತ್ತು ಈಡರ |
| ೯. ರೇವಾಕಾಂಠಾ ,, | ೪,೯೮೦ | ೪,೭೮,೮೯೪ | ನಾಡೋದ |
| ೧೦. ಗಾಯಕವಾಡರಾಜ್ಯ | ೮,೫೭೦ | ೨೧,೮೫,೦೦೫ | ಬಡೋದೆ |
| ೧೧. ಖಂಬಾಯತ ಸಂ. | ೩೫೦ | ೭೫,೧೨೨ | ಖಂಬಾಯತ |
| ೧೨. ಪಂಚಮಹಾಲ ಏ. | ೧,೬೧೩ | ೩,೧೩,೪೧೭ | ನಾರುಕೋಟ [ಸಚೀನ |
| ೧೩. ಸುರತ ಏಜನ್ಸೀ | ೧,೦೫೧ | ೧,೬೧,೦೧೦ | ವಾಸದಾ; ಧರಮಪುರ; |

## ೪. ಮಹಾರಾಷ್ಟ್ರ (ಮುಂಬಯಿ ದ್ವೀಪ ಹೊರ್ತಾಗಿ)

| | | | |
|---|---|---|---|
| ೧. ಠಾಣೆ ಜಿಲ್ಹೆ | ೩,೫೦೬ | ೮,೦೯,೩೬೧ | ಠಾಣೆ |
| ೨. ಜಹ್ವಾರ ಸಂಸ್ಥಾನ | ೫೩೫ | ೪೭,೨೬೪ | ಜಹ್ವಾರ |
| ೩. ಕುಲಾಬಾ ಜಿಲ್ಹೆ | ೨,೩೦೧ | ೬,೦೫,೧೬೫. | ಅಲೀಬಾಗ |
| ೪. ಜಂಜೀರಾ ಸಂಸ್ಥಾನ | ೩೨೪ | ೮೫,೩೯೨ | ಜಂಜೀರಾ |
| ೫. ರತ್ನಾಗಿರಿ ಜಿಲ್ಹೆ | ೩,೯೨೨ | ೧೧,೬೬,೮೯೦ | ರತ್ನಾಗಿರಿ |
| ೬. ಸಾವಂತವಾಡಿ ಸಂ. | ೯೨೬ | ೨,೧೭,೮೦೦ | ಸಾವಂತವಾಡಿ |

ದೇಶ.

| ಜಿಲ್ಲೆ ಅಥವಾ ಸಂಸ್ಥಾನ. | ಕ್ಷೇತ್ರಫಲ. | ಜನಸಂಖ್ಯೆ. | ಮುಖ್ಯ ಪಟ್ಟಣ. |
|---|---|---|---|
| ೧ ಎರಡು ಖಾನದೇಶ ಜಿಲ್ಲೆಗಳು | ೧೦,೯೦೭ | ೧೪,೪೨,೦೧೮ | ಧುಳೆ, ಅಮಳನೇರ |
| ೨. ಖಾನದೇಶ ಏಜನ್ಸಿ | ೬೬೦ | ೩೨,೯೨೦ | ,, |
| ೩. ನಾಸಿಕ ಜಿಲ್ಲೆ | ೫,೯೪೦ | ೮,೧೯,೫೭೫ | ನಾಸಿಕ |
| ೪. ನಾಸಿಕ ಏಜನ್ಸೀ | ೩೬೦ | ೧೨,೩೯೮ | ,, |
| ೫. ಅಹಮ್ಮದನಗರಜಿ. | ೬,೬೪೫ | ೮,೩೭,೭೭೪ | ಅಹಮ್ಮದನಗರ |
| ೬. ಪುಣೆ ಜಿಲ್ಲೆ | ೫,೩೬೯ | ೯,೯೫,೦೭೪ | ಪುಣೆ |
| ೭. ಭೋರ ಸಂಸ್ಥಾನ | ೧,೪೯೧ | ೧,೩೭,೨೬೯ | ಭೋರ |
| ೮. ಸಾತಾರಾ ಜಿಲ್ಲೆ | ೪,೯೮೭ | ೧೧,೪೬,೫೨೧ | ಸಾತಾರೆ |
| ೯. ಸಾತಾರೆಯ ಜಾಹಗೀರಗಳು | ೮೪೪ | ೧,೦೯,೬೧೪ | ಫಲಟಣ, ಔಂಧ |
| ೧೦. ಸೊಲ್ಲಾಪುರ ಜಿಲ್ಲೆ | ೪,೫೪೨ | ೭,೨೦,೯೭೮ | ಸೊಲ್ಲಾಪುರ |
| ೧೧. ಅಕ್ಕಲಕೋಟ ಸಂಸ್ಥಾನ | ೪೯೮ | ೮೨,೦೫೨ | ಅಕ್ಕಲಕೋಟ |

## ೫. ಮುಂಬಯಿ-ಕರ್ನಾಟಕ ಅಥವಾ ದಕ್ಷಿಣ ಮಹಾರಾಷ್ಟ್ರ ಮತ್ತು ಕಾನಡಾ.

| | | | |
|---|---|---|---|
| ೧. ವಿಜಾಪುರ ಜಿಲ್ಲೆ | ೫,೬೬೮ | ೭,೩೫,೦೪೧ | ವಿಜಾಪುರ |
| ೨. ಜತ್ತ ಸಂಸ್ಥಾನ | ೯೭೯ | ೭೯,೭೮೬ | ಜತ್ತ |
| ೩. ಬೆಳಗಾವಿ ಜಿಲ್ಲೆ | ೪,೬೫೭ | ೯,೯೪,೨೦೯ | ಬೆಳಗಾವಿ |
| ೪. ಕೊಲ್ಹಾಪುರ ಸಂ. | ೨,೯೧೯ | ೯,೧೦,೧೭೫ | ಕೊಲ್ಹಾಪುರ |
| ೫. ದಕ್ಷಿಣ ಮಹಾರಾಷ್ಟ್ರ ಜಾಹಗೀರಗಳು | ೨,೯೧೯ | ೬,೯೪,೮೮೬ | ಸಾಂಗಲಿ, ಜಮಖಂಡಿ, ಮಿರ್ಜ, ಕುರಂದವಾಡ, ಮುಧೋಳ, ರಾಮದುರ್ಗ, |
| ೬. ಧಾರವಾಡ ಜಿಲ್ಲೆ | ೪,೬೦೩ | ೭,೩೫,೦೪೧ | ಧಾರವಾಡ |
| ೭. ಸವಣೂರ ಸಂಸ್ಥಾನ | ೭೦ | ೧೮,೪೪೬ | ಸವಣೂರ |
| ೮. ಕಾನಡಾ ಜಿಲ್ಲೆ | ೩,೯೧೦ | ೪,೫೪,೨೩೮ | ಕಾರವಾರ |

## ೩ನೇ ಪ್ರಕರಣ.

### ರಾಜ್ಯ ಆಳುವ ರೀತಿಯು.

೧. ಈ ಇಲಾಖೆಯ ಮುಖ್ಯಾಧಿಕಾರಿಗಳು "ಗವ್ಹರ್ನರ್ ಇನ್ ಕೌನ್ಸಿಲ್." ಎಂಬವರು. ಇವರ ಕೈಕೆಳಗೆ ಸಿಂಧ ಪ್ರಾಂತದಲ್ಲಿ ಒಬ್ಬ ಕಮೀಶನರನಿರುತ್ತಾನೆ. ಗುಜರಾಥ, ಮಹಾರಾಷ್ಟ್ರ, ಮುಂಬಯಿ-ಕರ್ನಾಕಟ. ಅಥವಾ ದಕ್ಷಿಣ ಮಹಾರಾಷ್ಟ್ರ ಮತ್ತು ಕಾನಡಾ ಇವುಗಳಲ್ಲಿಯ ೧೯ ಜಿಲ್ಹೆಗಳಲ್ಲಿ ಉತ್ತರ, ಮಧ್ಯ. ದಕ್ಷಿಣ ಭಾಗಗಳೆಂಬ ಮೂರು ವಿಭಾಗಗಳನ್ನು ಮಾಡಿ, ಅವುಗಳನ್ನು ಕಮೀಶನರರೆಂಬ ಅಧಿಕಾರಿಗಳ ವಶದಲ್ಲಿ ಕೊಟ್ಟಿದ್ದಾರೆ. ಉತ್ತರ ಭಾಗದೊಳಗೆ ೧ ಅಹಮದಾಬಾದ, ೨ ಖೇಡಾ, ೩ ಪಂಚಮಹಾಲ, ೪ ಬಡೋಚ, ೫ ಸುರತ, ೬ ಠಾಣೆ, ಎಂಬ ಆರು ಜಿಲ್ಹೆಗಳುಂಟು. ಮಧ್ಯಭಾಗದೊಳಗೆ ೧ ನಾಸಿಕ, ೨ ಖಾನದೇಶ, ೩ ಪಶ್ಚಿಮ ಖಾನದೇಶ, ೪ ಅಹಮ್ಮದನಗರ, ೫ ಪುಣೆ, ೬ ಸಾತಾರೆ, ೭ ಸೊಲ್ಲಾಪುರ, ಎಂಬ ಏಳು ಜಿಲ್ಹೆಗಳುಂಟು; ದಕ್ಷಿಣ ಭಾಗದೊಳಗೆ ೧ ರತ್ನಾಗಿರಿ ೨ ಕುಲಾಬಾ (ಅಲಿಬಾಗ) ೩ ಬೆಳಗಾವಿ, ೪ ವಿಜಾಪೂರ, ೫ ಧಾರವಾಡ, ೬ ಕಾನಡಾ, ಎಂಬ ಆರು ಜಿಲ್ಹೆಗಳುಂಟು. ಸಂಸ್ಥಾನದ ಮೇಲ್ವಿಚಾರಣೆಗಾಗಿ ಪೊಲಿಟಿಕಲ್ ಏಜಂಟರು ನೇಮಿಸಲ್ಪಟ್ಟಿದ್ದಾರೆ.

೨. ಜಿಲ್ಹೆಗಳು.—ಪ್ರತಿ ಜಿಲ್ಹೆಯಲ್ಲಿ ಒಬ್ಬೊಬ್ಬ ಕಲೆಕ್ಟರನಿರುತ್ತಾನೆ. ಅವನಿಗೆ ಡಿಸ್ಟ್ರಿಕ್ಟ ಮ್ಯಾಜಿಸ್ಟ್ರೇಟನೆಂಬ ಹುದ್ದೆ ಇರುತ್ತದೆ. ಅವನು ಸರಕಾರೀ ಕಂದಾಯವನ್ನು ಎತ್ತಿ ಖರ್ಚಿನ ವ್ಯವಸ್ಥೆಯನ್ನು ನಡಿಸುತ್ತಾನೆ. ಅವನು ಮುಲಕಿ, ಫೌಜದಾರಿ, ಇವೆರಡು ಕೆಲಸಗಳನ್ನು ನಡಿಸುವದಲ್ಲದೆ, ಯಾವತ್ತು ಲೋಕೋಪಯೋಗಿ ಕೆಲಸಗಳಿಗೆ ಲಕ್ಷ್ಯ ಕೊಡುತ್ತಾನೆ, ಅವನ ಕೈಕೆಳಗೆ ಇಬ್ಬರಾಗಲಿ ಮೂವ

ರಾಗಲಿ ಅಸಿಸ್ಟಂಟ ಕಲೆಕ್ಟರರು, ಒಬ್ಬ ಹುಜೂರ ಡೆಪ್ಯೂಟೀ ಕಲೆಕ್ಟರನು, ಒಬ್ಬ ಡಿಸ್ಟ್ರಿಕ್ಟ ಡೆಪ್ಯೂಟೀ ಕಲೆಕ್ಟರನು ಇಷ್ಟು ಜನ ಸಹಾಯಕರು ಬಹುತರವಾಗಿ ಇರುವರು. ಅಸಿಸ್ಟಂಟರ ವಶದಲ್ಲಿಯೂ ಡಿಸ್ಟ್ರಿಕ್ಟ ಡೆಪ್ಯೂಟಿಗಳ ವಶದಲ್ಲಿಯೂ ಒಂದಾಗಲಿ ಹೆಚ್ಚಾಗಲಿ ತಾಲೂಕುಗಳು ಕೊಡಲ್ಪಟ್ಟಿರುತ್ತವೆ. ಹುಜೂರ ಡೆಪ್ಯೂಟೀ ಕಲೆಕ್ಟರನು ಜಿಲ್ಹೆಯ ಮುಖ್ಯ ಸ್ಥಳದಲ್ಲಿ ನಿಂತು, ತಿಜೋರಿಯ ಜಮಾ ಖರ್ಚು ಮುಂತಾದ ಕೆಲಸಗಳನ್ನು ನೋಡುತ್ತಾನೆ. ಇವರೆಲ್ಲರು ಫೌಜದಾರಿ ಕೆಲಸವನ್ನು ಸಹ ನಡಿಸುತ್ತಾರೆ. ಇವರಲ್ಲದೆ ಪೋಲಿಸ ಸುಪರಿಂಟೆಂಡೆಂಟನು ಎಗ್ಝಿಕ್ಯೂಟಿವ್ಹ ಇಂಜಿನಿಯರನು, ಮೋಜಣೀ ಖಾತೆಯ ಅಮಲದಾರರು, ಇವರೆಲ್ಲರು ಕಲೆಕ್ಟರನಿಗೆ ಸಹಾಯ ಮಾಡುತ್ತಾರೆ.

ಪೋಲಿಸ ಸುಪರಿಂಟೆಂಡೆಂಟನೂ ಅವನ ಕೈಕೆಳಗಿನ ಅಮಲದಾರರೂ ಕಳ್ಳರನ್ನೂ ದರೋಡೆಯವರನ್ನೂ ಹಿಡಿದು ಶಿಕ್ಷೆ ಕೊಡಿಸುವದಕ್ಕಾಗಿ ಅವರನ್ನು ಮ್ಯಾಜಿಸ್ಟ್ರೇಟರಕಡೆಗೆ ಕಳುಹುತ್ತಾರೆ. ಇಂಜನಿಯರನು ಮಾರ್ಗಗಳು, ಕೆರೆಗಳು, ಧರ್ಮಶಾಲೆಗಳು, ಮುಂತಾದ ಲೋಕೋಪಯೋಗಿ ಕೆಲಸಗಳನ್ನು ಮಾಡುತ್ತಾನೆ. ಮೋಜಣೀ ಜಮಾಬಂದೀ ಕೆಲಸಗಳನ್ನು ಮಾಡುವ ಅಗ್ರಿಕಲ್ ಚರಲ್ ಖಾತೆಯ ಅಧಿಕಾರಿಗಳು ಪ್ರತಿಭೂಮಿಯನ್ನು ಅಳೆದು ಪ್ರತಿ ಒಬ್ಬ ರೈತನು ಸರಕಾರಕ್ಕೆ ಕೊಡತಕ್ಕ ತೆರಿಗೆಯನ್ನು ಗೊತ್ತು ಮಾಡುತ್ತಾರೆ.

ಜಿಲ್ಹೆಗಳಲ್ಲಿ ತಾಲೂಕುಗಳೆಂಬ ವಿಭಾಗಗಳು ಮಾಡಲ್ಪಟ್ಟವೆ. ಪ್ರತಿ ತಾಲೂಕಿನಲ್ಲಿ ಕಲೆಕ್ಟರನ ಕೆಲಸವನ್ನು ಮಾಮಲೇದಾರನು ಮಾಡುತ್ತಾನೆ. ತಾಲೂಕು ದೊಡ್ಡದಿದ್ದರೆ, ಅದರೊಳಗೆ ಪೇಠಾ ಅಥವಾ ಮಹಾಲವೆಂಬ ಭಾಗ ಮಾಡುತ್ತಾರೆ; ಅದು ಮಹಾಲಕರಿ ಎಂಬ ಅಧಿಕಾರಿಯ ವಶದಲ್ಲಿ ಇರುತ್ತದೆ; ಅವನು ಮಾಮಲೇದಾರನ ಕೈಕೆಳಗಿನವನು.

ತಾಲೂಕಿನಲ್ಲಿ ಪೋಲಿಸ ಸುಪರಿಂಟೆಂಡೆಂಟನ ಕೆಲಸವನ್ನು ಫೌಜದಾರನು (ಸಬ್ ಇನ್‌ಸ್ಪೆಕ್ಟರ) ಮಾಡುತ್ತಾನೆ.

೩. ಒಂದೊಂದು ಜಿಲ್ಹೆಗೆ ಒಬ್ಬೊಬ್ಬ ಜಡ್‌ಜನಿರುತ್ತಾನೆ, ಅವನು ಮಾಜಿಸ್ಟ್ರೇಟರಿಂದ ಕಳುಹಲ್ಪಟ್ಟಂಥ ದೊಡ್ಡದೊಡ್ಡ ಫೌಜದಾರಿ ಮೊಕದ್ದಮೆಗಳನ್ನು ನಿರ್ಣಯಿಸುತ್ತಾನೆ. ಸ್ಥಾವರ ಜಂಗಮ ಮಾಲಿಗೂ, ಕೊಡಕೊಳ್ಳುವ ವ್ಯವಹಾರಕ್ಕೂ ಸಂಬಂಧವಾದ ದಿವಾಣಿ ವ್ಯಾಜ್ಯಗಳ ವಿಚಾರಣೆಯನ್ನೂ ಅವನೇ ಮಾಡುತ್ತಾನೆ. ಜಡ್‌ಜನ ಕೈಕೆಳಗೆ ಅಸಿಸ್ಟಂಟ ಜಡ್‌ಜನೂ ಸಬಾರ್ಡಿನೇಟ ಜಡ್‌ಜರೂ ಇರುತ್ತಾರೆ. ದಿವಾಣಿ ಮೊಕದ್ದಮೆಗಳನ್ನು ನಿರ್ಣಯಿಸುವದಕ್ಕಾಗಿ ದೊಡ್ಡ ದೊಡ್ಡ ಗ್ರಾಮಗಳಲ್ಲಿ ಸಬಾರ್ಡಿನೇಟ ಜಡ್‌ಜರ ಕೋರ್ಟುಗಳು ಇರುತ್ತವೆ. ದೊಡ್ಡ ದೊಡ್ಡ ಪಟ್ಟಣಗಳಲ್ಲಿ ಸ್ಮಾಲಕಾಜ (ಸಣ್ಣ ದಾವೆಗಳ) ಜಡ್‌ಜರಿರುತ್ತಾರೆ. ಅವರು ಸಣ್ಣ ಸಣ್ಣ ಕೊಡಕೊಳ್ಳುವ ವ್ಯಾಜ್ಯಗಳನ್ನು ಸಂಕ್ಷಿಪ್ತ ವಿಚಾರಣೆ ಮಾಡಿ ಬೇಗ ತೀರಿಸುತ್ತಾರೆ.

೪. ಪ್ರಜೆಗಳಿಗೆ ವಿದ್ಯೆ ಕಲಿಸುವ ಕೆಲಸದ ಮುಖ್ಯಾಧಿಕಾರಿಯಾದ ಡೈರೆಕ್ಟರ ದೊರೆಯು ಪುಣೆಯಲ್ಲಿ ಇರುತ್ತಾನೆ. ಅವನ ಕೈಕೆಳಗೆ ಉತ್ತರ, ಮಧ್ಯ, ದಕ್ಷಿಣ, ಈ ಮೂರು ಭಾಗಗಳಿಗೆ ಮೂವರು ಇನ್ಸಪೆಕ್ಟರರೆಂಬ ಅಧಿಕಾರಿಗಳುಂಟು. ಇವರು ಇಂಗ್ಲಿಷ ಶಾಲೆಗಳಲ್ಲಿಯೂ ದೇಶಭಾಷೆಯ ಶಾಲೆಗಳಲ್ಲಿಯೂ ನಡೆಯುವ ವಿದ್ಯಾಭ್ಯಾಸದ ವ್ಯವಸ್ಥೆಯನ್ನು ನೋಡುತ್ತಾರೆ. ಇನ್ಸಪೆಕ್ಟರರ ಕೈಕೆಳಗೆ ಜಿಲ್ಹೆಗೆ ಒಬ್ಬೊಬ್ಬನಂತೆ ಡೆಪ್ಯೂಟೀ ಇನ್ಸಪೆಕ್ಟರರು ದೇಶಭಾಷೆಯ ಶಾಲೆಗಳ ಮೇಲ್ವಿಚಾರಣೆಯನ್ನು ನಡಿಸುತ್ತಾರೆ. ಶಾಲೆಗಳ ಸಂಖ್ಯೆ ದಿನದಿನಕ್ಕೆ ಹೆಚ್ಚಾಗುತ್ತ ನಡೆದದೆ. ೩೦ ಅಥವಾ ಅದಕ್ಕೂ ಹೆಚ್ಚು ಹುಡುಗರು ಕೂಡುವಂಥ ಎಲ್ಲ ಸ್ಥಳಗಳಲ್ಲಿ ಈಗ ಶಾಲೆಗಳಾಗಿವೆ. ಅಹಮ್ಮದಾಬಾದ, ಪುಣೆ, ಧಾರ

ವಾಡ ಈ ಮೂರು ಪಟ್ಟಣಗಳಲ್ಲಿ ಮಾಸ್ತರ ಜನರನ್ನು ತಯಾರ ಮಾಡುವ ಟ್ರೇನಿಂಗ ಕಾಲೇಜಗಳೆಂಬ ವಿದ್ಯಾಲಯ ಗಳುಂಟು.

ಇಲಾಖೆಯೊಳಗಿನ ಅಡವಿಯ ಸಂರಕ್ಷಣೆಯು ಸರಿಯಾಗಿ ಆಗಬೇಕೆಂದು ಸಿಂಧ ಪ್ರಾಂತದಲ್ಲಿ ಒಂದು ಮತ್ತು ಉಳಿದ ಪ್ರಾಂತಗಳಲ್ಲಿ "ಉತ್ತರ" "ದಕ್ಷಿಣ" ಎಂಬ ಎರಡು ಭಾಗಗಳನ್ನು ಮಾಡಿ ಅವುಗಳ ಮೇಲೆ ಒಬ್ಬೊಬ್ಬ ಕಾನ್ ಸರ್ವೇಟರ ಆಫ್ ಫಾರೆಸ್ಟ ಎಂಬ ಅಧಿಕಾರಸ್ಥನನ್ನು ನೇಮಿ ಸಿರುತ್ತದೆ. ಇವರ ಕೈಕೆಳಗೆ ಜಿಲ್ಹೆಗೆ ಒಬ್ಬೊಬ್ಬನಂತೆ ಡೆಪ್ಯೂಟೀ ಕಾನ್‌ಸರ್ವೇಟರರಾಗಲಿ ಅಸಿಸ್ಟಂಟ ಕಾನ್‌ಸರ್ವೇ ಟರರಾಗಲಿ ಇರುತ್ತಾರೆ.

ಇಲಾಖೆಯಲ್ಲಿ ಎಲ್ಲ ಕಡೆಗೆ ಆರೋಗ್ಯ ರಕ್ಷಣದ ವಿಚಾ ರಣೆಗಾಗಿ ಸ್ಯಾನಿಟರೀ ಕಮಿಶನರನೆಂಬವನೊಬ್ಬ ಅಧಿಕಾ ರಿಯು ಇರುತ್ತಾನೆ. ಅವನು ಇಡೀ ಇಲಾಖೆಯೊಳಗೆ ಸಂಚಾರ ಮಾಡಿ ಅಲ್ಲಲ್ಲಿ ಬೇನೆಗಳ ಕಾರಣಗಳನ್ನು ತಿಳು ಕೊಂಡು ಅವಕ್ಕೆ ತಕ್ಕ ಉಪಾಯಗಳನ್ನು ಸರಕಾರದವರಿಗೆ ಸೂಚಿಸುವನು. ವೈಲೀ ಖಾತೆಯ ಮೇಲ್ವಿಚಾರಣೆಯ ಕೆಲಸ ವಾದರೂ ಅವನ ಕಡೆಗೇ ಉಂಟು. ಇವನ ಕೈಕೆಳಗೆ ಮೂರು ಮಂದಿ ಡೆಪ್ಯೂಟೀ ಸ್ಯಾನಿಟರೀ ಕಮಿಶನರರು ಇರುವರು. ದೊಡ್ಡ ಗ್ರಾಮಗಳಲ್ಲಿ ಆಸ್ಪತ್ರಿ ಎಂಬ ವೈದ್ಯ ಶಾಲೆಗಳಿರುತ್ತವೆ.

೫. ಪೊಲಿಟಿಕಲ್ ಏಜಂಟನು ತನ್ನ ಕೈಕೆಳಗಿನ ಸಂಸ್ಥಾ ನಗಳ ಮೇಲ್ವಿಚಾರಣೆಯನ್ನು ಮಾಡುವನು. ಅವನಿಗೆ ಒಬ್ಬಿ ಬ್ಬರಾಗಲಿ ಹೆಚ್ಚು ಜನರಾಗಲೀ ಅಸಿಸ್ಟಂಟರಿರುತ್ತಾರೆ. ಸಂಸ್ಥಾನಿಕರಲ್ಲಿ ಪರಸ್ಪರ ವ್ಯಾಜ್ಯಗಳಿದ್ದರೆ ಅವುಗಳನ್ನು ತೀರಿಸುವದು, ಅವರ ಕಡೆಯಿಂದ ಕಪ್ಪದ ಹಣ ಎತ್ತುವದು, ಅವರಿಗೆ ಒಳ್ಳೇ ಮಾರ್ಗ ತೋರಿಸುವದು, ಇವೇ ಪೊಲಿಟಿಕಲ್ ಏಜಂಟನು ಮಾಡತಕ್ಕ ಮುಖ್ಯ ಕೆಲಸಗಳು. ಕಪ್ಪದ ಹಣ

ದಲ್ಲಿ ಗಾಯಕವಾಡ ಮುಂತಾದ ಬೇರೆ ಸಂಸ್ಥಾನಿಕರ ಭಾಗ ವಿದ್ದರೆ, ಅದನ್ನು ಸದರೀ ಅಮಲದಾರನು ಅವರಿಗೆ ಮುಟ್ಟಿಸು ವನು. ಯಾವನೊಬ್ಬ ಸಂಸ್ಥಾನಿಕನು ತೀರಲಾಗಿ ಅವನ ವಾರಸದಾರನು (ಸಂಸ್ಥಾನದ ಬಾಧ್ಯಸ್ಥನು) ಚಿಕ್ಕವನಿದ್ದರೆ, ಪೊಲಿಟಿಕಲ್ ಏಜಂಟನು ಅವನ ಸಂಸ್ಥಾನದ ಕಾರಭಾರ ವನ್ನು ನಡಿಸುತ್ತಾನೆ. ಕೆಲವು ಕಡೆಯಲ್ಲಿ ಈ ಹುದ್ದೇದಾ ರರೂ ಮುಖ್ಯ ಅರಸರೂ ಬೇರೆ ಕೆಲವರು ಬುದ್ಧಿವಂತರೂ ಕೂಡಿ, ಖೂನಿ, ದರೋಡೆ, ಮುಂತಾದ ದೊಡ್ಡ ಅಪರಾಧಗಳ ಚೌಕಶಿಯನ್ನು ಮಾಡುತ್ತಾರೆ.

೬. ಜಿಲ್ಹೆಯ ಮುಖ್ಯ ಸ್ಥಳದಲ್ಲಿ ಒಬ್ಬ ಪೋಸ್ಟ ಮಾಸ್ತ ರನಿರುತ್ತಾನೆ; ಮತ್ತು ತಾಲೂಕಿನ ಗ್ರಾಮಗಳಲ್ಲಿಯೂ ಟಪಾಲಿನ ಕೆಲಸ ಸಾಗಬಹುದಾದಂಥ ಕಸಬೆಗಳಲ್ಲಿಯೂ ಹಳ್ಳಿಗಳಲ್ಲಿಯೂ ಡೆಪ್ಯೂಟೀ ಪೋಸ್ಟ ಮಾಸ್ತರರೆಂಬ ಕಾರ ಕೂನರಿರುತ್ತಾರೆ. ಅವರು ಸರಕಾರಿ ಲಖೋಟೆಗಳನ್ನೂ ಬೇರೆ ಜನರ ಲಖೋಟೆಗಳನ್ನೂ ವಿಳಾಸದಲ್ಲಿ ಬರೆದ ಸ್ಥಳಕ್ಕೆ ಮುಟ್ಟಿಸುವ ಕೆಲಸ ನೋಡುತ್ತಾರೆ. ಇವರ ಕೆಲಸದ ಮೇಲ್ವಿ ಚಾರಣೆಗಾಗಿ ಪೋಸ್ಟಲ್ ಇನ್‌ಸ್ಪೆಕ್ಟರ, ಪೋಸ್ಟಲ್ ಸುಪ ರಿಂಟೆಂಡೆಂಟ ಎಂಬ ಅಧಿಕಾರಿಗಳು ನೇಮಿಸಲ್ಪಟ್ಟಿದ್ದಾರೆ. ಇವರೆಲ್ಲರ ಮೇಲೂ ಪೋಸ್ಟಮಾಸ್ತರಜನರಲ್‌ನೆಂಬ ಇಲಾ ಖೆಗೊಬ್ಬ ಮುಖ್ಯ ಅಧಿಕಾರಸ್ಥನಿರುತ್ತಾನೆ.

ತಂತೀಟಪಾಲಿನ ಲೇಖ್ಯಗಳನ್ನು ತಕ್ಕೊಂಡು ಪರಸ್ಥಳಕ್ಕೆ ಕಳಿಸುವ ಕೆಲಸವನ್ನಾದರೂ ಪೋಸ್ಟ ಮಾಸ್ತರರೂ ಡೆಪ್ಯೂ ಟೀ ಪೋಸ್ಟ ಮಾಸ್ತರರೂ ಮಾಡುತ್ತಾರೆ.

೭. ಪ್ರತಿ ಜಿಲ್ಹೆಯಲ್ಲಿ ಒಬ್ಬೊಬ್ಬ ಸಿವ್ಹಿಲ್ ಸರ್ಜನನಿರು ತ್ತಾನೆ. ಅವನು ಬೇನೆ ಬಿದ್ದವರಿಗೆ ಔಷಧ ಕೊಡುತ್ತಾನೆ; ಹೆಚ್ಚಿನ ಬೇನೆಯವರನ್ನು ಆಸ್ಪತ್ರಿಯಲ್ಲಿಟ್ಟು ಅವರಿಗೆ ಔಷ ಧಪಥ್ಯಗಳನ್ನು ಅಲ್ಲೇ ನಡಿಸುವನು. ಈ ಕೆಲಸದ ಸಲುವಾಗಿ

ಜಿಲ್ಹೆಯೊಳಗಿನ ದೊಡ್ಡ ದೊಡ್ಡ ಗ್ರಾಮಗಳಲ್ಲಿ "ಡಿಸ್ಪೆನ್ಸರಿಗಳು" ಅಂದರೆ ದವಾಖಾನೆಗಳು ಸ್ಥಾಪಿಸಲ್ಪಟ್ಟವೆ.

೮. ಜಿಲ್ಹೆಯ ಮುಖ್ಯ ಗ್ರಾಮಗಳಲ್ಲಿಯೂ, ತಾಲೂಕಿನ ಮುಖ್ಯ ಗ್ರಾಮಗಳಲ್ಲಿಯೂ ಲೋಕಲ್ ಬೋರ್ಡೆಂಬ ಸಂಘಗಳಿರುತ್ತವೆ. ಅವುಗಳ ಮೆಂಬರರಲ್ಲಿ ಕೆಲವರು ಸರಕಾರದಿಂದ ನೇಮಿಸಲ್ಪಟ್ಟವರೂ, ಕೆಲವರು ಊರವರಿಂದ ಆರಿಸಿ ನೇಮಿಸಲ್ಪಟ್ಟವರೂ ಇರುತ್ತಾರೆ. ಸರಕಾರಿ ಕಂದಾಯದ ಮೇಲೆ ರೂಪಾಯಿಗೆ ಒಂದು ಆಣೆಯಂತೆ ಎತ್ತಲ್ಪಡುವ ಲೋಕಲ್ ಫಂಡಿನ ಹಣದ ದೊಡ್ಡ ಭಾಗವನ್ನು ಈ ಬೋರ್ಡುಗಳಿಗೆ ಕೊಡುವರು. ಆ ಹಣದಿಂದ ಕೈಕೆಳಗಿನ ಗ್ರಾಮಗಳಲ್ಲಿ ಕುಡಿಯುವ ನೀರು ಪೂರೈಸುವಂಥ ಜಲಾಶಯಗಳನ್ನು ಕಟ್ಟಿಸುವದೂ, ಶಾಲೆಗಳ ಮನೆಗಳನ್ನು ಕಟ್ಟಿಸುವದೂ, ಹೊಸ ಸಡಕುಗಳನ್ನು ಕಟ್ಟಿಸುವದೂ ಮುಂತಾದ ಕಾರ್ಯಗಳನ್ನು ಬೋರ್ಡಿನವರು ಮಾಡಿಸುವರು. ಲೋಕಲ್ ಬೋರ್ಡಿನ ಮುಖ್ಯಾಧಿಕಾರಿಗೆ ಪ್ರೆಸಿಡೆಂಟನೆಂಬ ಪದವಿ ಇರುತ್ತದೆ.

೯. ಇದರಂತೆ ಜಿಲ್ಹೆಯ ಮುಖ್ಯ ಗ್ರಾಮಗಳಲ್ಲಿಯೂ ತಾಲೂಕಿನ ಮುಖ್ಯ ಗ್ರಾಮಗಳಲ್ಲಿಯೂ ಮ್ಯುನಿಸಿಪಾಲಿಟಿಗಳೆಂಬ ಸಂಘಗಳಿರುತ್ತವೆ. ಇವುಗಳಲ್ಲಿಯೂ ಕೆಲವರನ್ನು ಊರವರು ಆರಿಸಿ ನೇಮಿಸಿರುವರು; ಮಾರಾಟಕ್ಕೆ ಬರುವ ಸರಕುಗಳ ಮೇಲೆ ಜಕಾತಿಯನ್ನೂ, ಮನೆಗಳ ಮೇಲೆ ಮನೆಪಟ್ಟಿಯನ್ನೂ ಎತ್ತುವ ಅಧಿಕಾರವು ಮ್ಯುನಿಸಿಪಾಲಿಟಿಗಳಿಗೆ ಕೊಡಲ್ಪಟ್ಟಿರುತ್ತದೆ. ಆ ಹಣದಿಂದ ಊರೊಳಗಿನ ಬೀದಿಗಳನ್ನು ದುರುಸ್ತು ಮಾಡಿಸಿ, ನಿತ್ಯ ಬೆಳಗ್ಗೆ ಉಡುಗಿಸುವದೂ, ರಾತ್ರಿಯಲ್ಲಿ ಬೀದಿಗಳಲ್ಲಿ ಕಂದೀಲುಗಳನ್ನು ಹಚ್ಚಿಸುವದೂ, ಊರೊಳಗಿನ ದೇಶಭಾಷೆಯ ಶಾಲೆಗಳ ಖರ್ಚು ನಡಿಸುವದೂ ಮುಂತಾದ ಕಾರ್ಯಗಳನ್ನು ಮ್ಯುನಿಸಿಪಾಲಿಟಿಗಳು ಮಾಡಿ

ಸುತ್ತವೆ. ಮ್ಯುನಿಸಿಪಾಲಿಟಿಯ ಮುಖ್ಯಸ್ಥನಿಗೆ ಪ್ರೆಸಿಡೆಂಟ ನೆಂತಲೂ, ಕೆಲಸಮಾಡುವ ಕಮಿಟಿಯ ಮುಖ್ಯಸ್ಥನಿಗೆ ಚೆಯರಮನ್ನನೆಂತಲೂ ಪದವಿಗಳಿರುತ್ತವೆ.

## ೪ನೇ ಪ್ರಕರಣ.

## ಮುಂಬಯಿ ದ್ವೀಪವೂ ಪಟ್ಟಣವೂ.

ಮುಂಬಯಿ ದ್ವೀಪವು:—ಇದು ಈ ಇಲಾಖೆಯಲ್ಲಿ (೧) ಮುಖ್ಯ ದ್ವೀಪವೂ, (೨) ರಾಜಧಾನಿಯೂ, (೩) ವ್ಯಾಪಾರದ ಮುಖ್ಯಸ್ಥಳವೂ, ಬಂದರವೂ ಆಗಿರುತ್ತದೆ. ಮುಂಬಯಿ ನಡುಗಡ್ಡೆಯು ಒಂದು ಸ್ವತಂತ್ರ ಭಾಗವದೆ. ಅದು ಮೇಲೆ ವಿವರಿಸಿದ ಭಾಗಗಳೊಳಗೆ ಸೇರಿರುವದಿಲ್ಲ. ಈ ನಡುಗಡ್ಡೆಯು ಸಮನೆಲವುಳ್ಳದ್ದೂ, ಎರಡೂ ಬದಿಗೂ ಸಣ್ಣ ಸಣ್ಣ ಗುಡ್ಡಗಳುಳ್ಳದ್ದೂ ಇರುತ್ತದೆ.

೧. ಈ ನಡುಗಡ್ಡೆಯು ಪಶ್ಚಿಮ ಥಡದ ನೆರೆಯಲ್ಲಿರುತ್ತದೆ. ಉದ್ದಳತೆ ಕುಲಾಬಾ ಸಹಿತ ೧೧ ಮೈಲು; ಅಗಲು ೩ ಮೈಲು; ಇದಕ್ಕೆ ಹೊಂದಿ ಸಾಷ್ಟಿ (ಸಾಲಸೀಟ), ವಸಯಿ ಎಂಬ ಚಿಕ್ಕ ನಡುಗಡ್ಡೆಗಳಿರುತ್ತವೆ. ಮುಂಬಯಿಗೂ ಪಶ್ಚಿಮ ಥಡಕ್ಕೂ ನಡುವೆ ಸಮುದ್ರವು ಸುಮಾರು ೬೭ ಮೈಲು ಅಗಲು ಇರುತ್ತದೆ. ಇದೇ ಬಂದರದ ಪ್ರದೇಶವು. ಈ ಬಂದರದ ಪಶ್ಚಿಮಕ್ಕೆ ಮುಂಬಯಿ ದ್ವೀಪವಿರುವದರಿಂದ ಇಲ್ಲಿ ಹಡಗಗಳಿಗೆ ಬಿರುಗಾಳಿಯಿಂದಾಗಲಿ ಸಮುದ್ರದ ತೆರೆಗಳಿಂದಾಗಲಿ ಎಷ್ಟುಮಾತ್ರವೂ ಅಪಾಯವಾಗುವಂತೆ ಇಲ್ಲ. ಭೂಮಿಯ ಮೇಲೆ ಹೆಸರಾದ ದೊಡ್ಡ ಬಂದರಗಳಲ್ಲಿ ಇದೊಂದಾಗಿದೆ; ಮತ್ತು ಇದು ಯಾವಾಗಲೂ ಹಡಗಗಳಿಂದಲೂ, ಉಗಿ ಹಡಗಗಳಿಂದಲೂ ತುಂಬಿರುತ್ತದೆ. ಈ ಬಂದರದ ಸಮುದ್ರದಲ್ಲಿ ಹಲವು ಚಿಕ್ಕ ನಡುಗಡ್ಡೆಗಳಿವೆ. ಅವುಗಳಲ್ಲಿ ಘಾರಪುರಿ (ಎಲಿಫಂಟಾ) ಮುಖ್ಯವು. ಘಾರಪುರಿಯಲ್ಲಿಯೂ ಕಾನೇರಿ ಎಂಬಲ್ಲಿಯೂ ಗುಡ್ಡದೊಳಗೆ ಬಹು ರಮಣೀಯವಾಗಿ ಕೊರದಂಥ ಬುನಾ

ದಿಯು ಜೈನಗುಡಿಗಳುಂಟು. ಈ ದ್ವೀಪದ ಪೂರ್ವದ ಕಡೆಗೆ ಕೋಟೆ ಇತ್ತು. ಆದರೆ ಸ್ವಲ್ಪ ವರ್ಷಗಳ ಹಿಂದೆ ಸರಕಾರ ದವರು ಆ ಕೋಟೆಯ ಗೋಡೆಗಳನ್ನು ಕೆಡವಿಸಿದರು. ಆ ಗೋಡೆಗಳೊಳಗಿನ ಪ್ರದೇಶಕ್ಕೆ ಈಗಲೂ "ಕೋಟೆ" ಯೆನ್ನು ತ್ತಾರೆ. ಮತ್ತು ಅಲ್ಲಿ ದೊಡ್ಡ ದೊಡ್ಡ ವ್ಯಾಪಾರಸ್ಥರು, ಸಾವು ಕಾರರು ಮುಂತಾದವರ ಅಂಗಡಿಗಳುಂಟು. ಮುಲ್ಕೀ, ನ್ಯಾಯ, ವಿದ್ಯಾ, ಟಪಾಲ, ತಾರಯಂತ್ರ, ಮುಂತಾದ ಖಾತೆಗಳ ಮುಖ್ಯ ಕಚೇರಿಗಳಿಗಾಗಿ ಸರಕಾರದವರು ಇಲ್ಲಿ ಭವ್ಯವಾದ ಕಟ್ಟಡ ಗಳನ್ನು ಕಟ್ಟಿಸಿದ್ದಾರೆ.

ಈಗ ಸಮುದ್ರಗಳೊಳಗೆ ಕಲ್ಲು, ಮಣ್ಣು ಹಾಕಿ ಬಹಳ ನೆಲವನ್ನು ಬೆಳಿಸಿರುತ್ತಾರೆ. ಸಾಂಪ್ರತಕ್ಕೆ ಈ ಪಟ್ಟಣದಲ್ಲಿ ಅತಿ ಸುಂದರವಾದ ಭವ್ಯ ಮಂದಿರಗಳು ಅಲ್ಲಲ್ಲಿಗೆ ಕಾಣಿಸು ವಂತೆ ಈ ಇಲಾಖೆಯ ಬೇರೆ ಯಾವ ಪಟ್ಟಣದಲ್ಲಿಯೂ ಇಲ್ಲ. ಇಲ್ಲಿಯ ಜನಸಂಖ್ಯೆ ಸುಮಾರು ೮,೨೧,೭೬೪. ಇಷ್ಟು ದೊಡ್ಡ ಪಟ್ಟಣವು ನಮ್ಮ ದೇಶದಲ್ಲಿ ಕಲಕತ್ತೆಯ ಹೊರ್ತು ಮತ್ತೊಂದಿಲ್ಲ. ಲಂಡನವನ್ನುಳಿದು ಬ್ರಿಟಿಶ ರಾಜ್ಯದಲ್ಲಿ ಮುಂಬಯಿ ನಗರವು ಅತಿ ದೊಡ್ಡದಾಗಿರುತ್ತದೆ. ಇಲ್ಲಿ ನಾನಾ ದೇಶದ ಜನರನ್ನು ಕಾಣಬಹುದು; ಆದರೆ ಮುಖ್ಯವಾಗಿ ಇಂಗ್ಲಿಷ, ಮರಾಠೀ ಗುಜರಾಥೀ ಭಾಷೆಗಳು ನಡೆಯುತ್ತವೆ. ಪೃಥ್ವಿಯ ಎಲ್ಲ ಭಾಗಗಳಿಂದ ವ್ಯಾಪಾರಕ್ಕಾಗಿ ಇಲ್ಲಿಗೆ ಬಂದ ಜನರು ಇಂಗ್ಲಿಷ ಹಾಗು ಬೇರೆ ಅನೇಕ ಭಾಷೆಗಳನ್ನಾಡು ತ್ತಾರೆ. ಇಲ್ಲಿಂದ ಕಲಕತ್ತೆ ೧,೩೦೧ ಮೈಲು, ಮದ್ರಾಸ ೭೯೩ ಮೈಲು. ಉತ್ತರದ ಕಡೆಯ ಭಾಗವು ಸಾಷ್ಟೀ, ವಾಂದ್ರಾ ನಡುಗಡ್ಡೆಗಳಿಗೆ ಪೂಲಿನಿಂದ ಕೂಡಿಸಲ್ಪಟ್ಟದೆ. ಕುಡಿಯುವ ನೀರು ಸಾಷ್ಟಿ ನಡುಗಡ್ಡೆಯಲ್ಲಿಯ ವಿಹಾಡ ಎಂಬ ದೊಡ್ಡ ಸರೋವರದಿಂದ ೧೬ ಮೈಲು ಕಬ್ಬಿಣದ ನಳ ಹಾಕಿ ತಂದಿರು ತ್ತಾರೆ, ಅದೇ ಮೇರೆಗೆ ತುಳಸೀ ಮತ್ತು ಟಾನ್ಸಾ ಎಂಬ

ದೊಡ್ಡ ಕೆರೆಗಳಿಂದ ನಳಗಳ ಮಾರ್ಗವಾಗಿ ನೀರು ಊರೊಳಗೆ ತರಲ್ಪಟ್ಟದೆ.

೨. ಈ ಇಲಾಖೆಯ ಗವ್ಹರ್ನರನೆಂಬ ಮುಖ್ಯಾಧಿಕಾರಿಯು ಮುಂಬಯಿಯಲ್ಲಿರುತ್ತಾನೆ. ಇದಲ್ಲದೆ ಹಿಂದೆ ಹೇಳಿದ ಯಾವತ್ತು ಖಾತೆಗಳ ಮುಖ್ಯಸ್ಥಳ ಕಚೇರಿಗಳು ಇದೇ ಪಟ್ಟಣದಲ್ಲಿ ಇರುತ್ತವೆ. ಉಗಿಬಂಡಿಯ ಸ್ಟೇಶನ್‌ಗಳೂ ಹಲವುಂಟು.

೩. ಈ ದೇಶದ ಯಾವತ್ತು ಬಂದರಗಳಲ್ಲಿ ಮುಂಬಯಿ ಬಂದರವು ಹೆಚ್ಚು ದೊಡ್ಡದೂ, ಹಡಗಗಳನ್ನು ಇಡಲಿಕ್ಕೆ ಅನುಕೂಲವಾದದ್ದೂ, ನಿರ್ಭಯವೂ ಆಗಿರುವದಲ್ಲದೆ ವಿಲಾಯತಿಗೆ ಹೆಚ್ಚು ಸಮೀಪವಿರುವ ಕಾರಣ ಅಲ್ಲಿಂದ ಬರುವ ಹಡಗಗಳೆಲ್ಲ ಮೊದಲು ಈ ಬಂದರಕ್ಕೆ ಬರುತ್ತವೆ. ದಂಡೆಯಲ್ಲಿ ನಿಂತು ನೋಡಿದರೆ, ಸಮುದ್ರದಲ್ಲಿ ಎತ್ತ ನೋಡಿದತ್ತ ಪಟಸ್ತಂಭಗಳ ಅಡವಿ ದಟ್ಟಾಗಿ ಬೆಳೆದ ಹಾಗೆ ಕಾಣುತ್ತದೆ. ಯುರೋಪದ ಸರಕುಗಳನ್ನು ತರಿಸುವವರೂ ಈ ದೇಶದವುಗಳನ್ನು ಯುರೋಪಕ್ಕೆ ಕಳುಹುವವರೂ ಆದ ವರ್ತಕರೆಷ್ಟೋ ಜನರು ಕೋಟ್ಯಾಧೀಶರಾಗಿ ಇಲ್ಲಿ ವಾಸಿಸುತ್ತಾರೆ. ಇದೇ ಮೇರೆಗೆ ಸರಕಾರಿ ಟಂಕಸಾಲೆ, ಹಡಗ ಕಟ್ಟುವದು, ಕಬ್ಬಿಣ ಹೊಯ್ಯುವದು,ಕಾಗದ ಮಾಡುವದು,ಅರಿವೆಗೆ ಬಣ್ಣ ಕೊಡುವದು, ತೊಗಲಿಗೆ ಕರಿಹಾಸುವದೂ ಬಣ್ಣ ಹಾಕುವದೂ ಮುಂತಾದ ಕೈಗಾರಿಕೆಯ ಕಾರಖಾನೆಗಳು ಬಹಳ ಉಂಟು. ನೂಲಿನ ಹಾಗು ವಸ್ತ್ರನೇಯುವ ಗಿರಣಿಗಳು ಹಲವು ಉಂಟು. ತೆಂಗು ಬಹಳ; ಅದರಿಂದ ಹೆಂಡತೆಗೆಯುತ್ತಾರೆ.

ಈ ಪಟ್ಟಣವಷ್ಟೇ ಒಂದು ಬೇರೆ ಜಿಲ್ಹೆಯಾಗಿರುತ್ತದೆ, ಕಲೆಕ್ಟರನೆಂಬ ಅಧಿಕಾರಿಯು ಭೂಮಿಯ ತೆರಿಗೆಯನ್ನೂ ಸ್ಟಾಂಪುಗಳ ಉತ್ಪನ್ನವನ್ನೂ ಎತ್ತುತ್ತಾನೆ. ಉಪ್ಪು, ಅಫು, ಸರಾಯಿ, ಹಡಗಗಳಿಂದ ಬರುವ ಪರದೇಶದ ಮಾಲು, ಇವುಗಳ ಸುಂಕವನ್ನು ಕಸ್ಟಮ್ ಕಮಿಶನರನೆಂಬ ಅಧಿಕಾರಿಯು

ಎತ್ತುತ್ತಾನೆ. ಆದರೆ ಪಟ್ಟಣದ ಕಾರಭಾರವೆಲ್ಲ ಮ್ಯುನಿಸಿಪಾಲಿಟಿ ಎಂಬ ಸಭೆಯವರ ಕೈಯ್ಯಲ್ಲುಂಟು. ಈಗ ಈ ಸಭೆಯವರಿಗೆ ತೆರಿಗೆಗಳ ಆಡಾಯ ವರ್ಷಕ್ಕೆ ೫೦ ಲಕ್ಷ ರೂಪಾಯಿ ಇರುತ್ತದೆ.

ಯುರೋಪದಿಂದ ಮುಂಬಯಿಗೆ ಬರುವ ಹಡಗುಗಳ ಸಂರಕ್ಷಣೆಗಾಗಿ ಅರಬಸ್ತಾನದ ನೈಋತ್ಯ ಮೂಲೆಯಲ್ಲಿ ಆದನ ಎಂಬಲ್ಲಿ ಬ್ರಿಟಿಶ್ ಸರಕಾರದವರದೊಂದು ಠಾಣ್ಯ ಉಂಟು. ಇದರ ಕ್ಷೇತ್ರ ೮೫ ಚ. ಮೈಲು, ಜನಸಂಖ್ಯೆ ೩೫,೦೫೫. ಹವೆ ಉಷ್ಣ; ಮಳೆ ಕಡಿಮೆ. ಆದನದಿಂದ ಸ್ವಲ್ಪ ಅಂತರದ ಮೇಲೆ ಕೆಂಪು ಸಮುದ್ರದೊಳಗೆ ಪೆರಿಮ್ ಎಂಬದೊಂದು ನಡುಗಡ್ಡೆಯು ಬ್ರಿಟಿಶ್ ಸರಕಾರದವರ ವಶದಲ್ಲಿ ಉಂಟು.

---

## ೨ ನೇ ಭಾಗ
## ಸಿಂಧ ಪ್ರಾಂತವು.

ಮುಂಬಯಿ ಇಲಾಖೆಯಲ್ಲಿ ಈ ಪ್ರಾಂತವು ಎಲ್ಲಕ್ಕೂ ಉತ್ತರಕ್ಕಿರುತ್ತದೆ. ಇದರ ಉತ್ತರಕ್ಕೆ ಪಂಜಾಬ, ಬಲೂಚಿಸ್ಥಾನ; ಪೂರ್ವಕ್ಕೆ ಜಸಲಮೀರದ ಬೈಲು, ರಜಪೂತಸ್ಥಾನದ ಸಂಸ್ಥಾನಗಳು; ದಕ್ಷಿಣಕ್ಕೆ ಕಚ್ಛದ ರಣವೆಂಬ ಬೈಲು, ಅರಬೀ ಸಮುದ್ರ; ಪಶ್ಚಿಮಕ್ಕೆ ಹಾಲಾ, ಸುಲೈಮಾನ ಎಂಬ ಪರ್ವತಾವಳಿಗಳು ಉಂಟು. ಈ ಪ್ರಾಂತದ ಕ್ಷೇತ್ರಫಲ ೫೪,೧೨೩ ಚಚ್ಚೌಕು ಮೈಲು. ಜನಸಂಖ್ಯೆ ೨೫,೪೨,೯೭೭ ಉಂಟು; ಇವರಲ್ಲಿ ⅘ ಮುಸಲಮಾನರಿರುತ್ತಾರೆ. ಈ ಪ್ರಾಂತದಲ್ಲಿ ಬಹುತರ ಸಿಂಧಿ, ಬಲೂಚಿ ಭಾಷೆಗಳನ್ನಾಡುತ್ತಾರೆ. ಮಧ್ಯಭಾಗದಲ್ಲಿ ಸಿಂಧು ನದವಿರುತ್ತದೆ; ಅದರ ದಂಡೆಯ ಸೀಮೆಯು ತಗ್ಗು ದಿನ್ನೆಗಳಿಲ್ಲದ ಬೈಲಾಗಿ ಬೆಳೆಯುಳ್ಳದ್ದಿರುತ್ತದೆ. ಈ ಪ್ರಾಂತದಲ್ಲಿ ಮಳೆ ಬಹು ಸ್ವಲ್ಪ; ಆದರೆ ಮಾರ್ಚ ತಿಂಗಳಿನಿಂದ ಸಪಟಂಬರ ವರೆಗೆ ಸಿಂಧು ಹೊಳೆಯ ನೀರು ಏರುತ್ತಿರುತ್ತದೆ. ಆದದರಿಂದ ಮಧ್ಯಭಾಗದ ಸವನೆಲದ

ಪ್ರದೇಶವೆಲ್ಲ ಮಹಾಪೂರದಿಂದ ತುಂಬಿ ಹೋಗುತ್ತದೆ. ಇದಲ್ಲದೆ ಈ ಹೊಳೆಯು ಕಾಲಿವೆಗಳನ್ನು ಬಹಳ ದೂರ ಒಯಿದಿರುತ್ತಾರೆ. ಈ ಪ್ರಾಂತದ ಪಶ್ಚಿಮಭಾಗದಲ್ಲಿ ಗುಡ್ಡಗಳು ಬಹಳ; ಅಲ್ಲಿ ಕುರುಬರೇ ವಿಶೇಷವಾಗಿ ವಾಸಿಸುತ್ತಾರೆ. ಇದರ ಪೂರ್ವಕ್ಕೆ ದೊಡ್ಡ ಬೈಲುಂಟು; ಅದರಲ್ಲಿ ಉಸುಬಿನ ಗುಡ್ಡಗಳು ಬಹಳ ಉಂಟು. ದಕ್ಷಿಣ ಭಾಗವು ಕ್ಷಾರಮಯವಾಗಿ ರೋಗಗಳನ್ನು ಹುಟ್ಟಿಸುತ್ತದೆ. ಸಿಂಧ ಪ್ರಾಂತದಲ್ಲಿ ಒಕ್ಕಲತನವು ವಿಶೇಷವಾಗಿ ನಡೆಯುತ್ತದೆ; ಹುಲ್ಲಿನ ಅಡವಿಗಳಾದರೂ ಬಹಳ. ಆದಾಗ್ಯೂ ಈ ಪ್ರಾಂತದಲ್ಲಿ ಮಣ್ಣಿನ ಪಾತ್ರೆಗಳು, ತೊಗಲಿನ ಸಾಮಾನುಗಳು, ರತ್ನಗಂಬಳಿಗಳು ಬಳಿತಾಗಿ ಹುಟ್ಟುತ್ತವೆ. ಸಿಂಧು ಹೊಳೆಯೊಳಗಿಂದ ಉಗಿ ಹಡಗುಗಳು ಮುಲ್ತಾನದವರೆಗೆ ಹೋಗುತ್ತವೆ.

ಈ ಪ್ರಾಂತದ ಮುಖ್ಯಾಧಿಕಾರಿಯು ಒಬ್ಬ ಕಮಿಶನರನಿರುತ್ತಾನೆ. ಇದರಲ್ಲಿ ೫ ಭಾಗಗಳುಂಟು; ಅವುಗಳಲ್ಲಿ ನಡುವಿನ ೩ ಭಾಗಗಳಲ್ಲಿ ಬೆಳೆಯು ಚನ್ನಾಗಿ ಬರುತ್ತದೆ. ಅವುಗಳಿಗೆ ಜಿಲ್ಹೆಗಳೆನ್ನುವರು. ಈ ಜಿಲ್ಹೆಗಳ ಹೆಸರುಗಳು:— ಶಿಕಾರಪುರ, ಕರಾಚಿ, ಹೈದರಾಬಾದ. ಉಳಿದ ಎರಡು ಭಾಗಗಳು ಪೊಲಿಟಿಕಲ್ ಸುಪರಿಂಟೆಂಡೆಂಟನ ವಶದಲ್ಲಿರುತ್ತವೆ. ಅದಲ್ಲದೆ ಖೈರಪುರವೆಂಬದೊಂದು ಮುಸಲಮಾನೀ ಸಂಸ್ಥಾನವಿರುತ್ತದೆ.

೧. ಅಪ್ಪರ ಸಿಂಧ ಫ್ರಂಟಿಯರ (ಮೇಲಿನ ಸಿಂಧ ಪ್ರಾಂತದ ಮೇರೆಯ ಸೀಮೆ)-ಇದು ಈ ಇಲಾಖೆಯ ಎಲ್ಲಕ್ಕೂ ಉತ್ತರದ ಭಾಗವದೆ; ಇದರಲ್ಲಿ ಮೂರು ತಾಲೂಕಗಳುಂಟು; ಈ ಪ್ರದೇಶವು ಬಹುತರ ಬಂದೇ ಸವನಾಗಿರುತ್ತದೆ. ಉತ್ತರ ಭಾಗದ ಭೂಮಿಯಲ್ಲಿ ಒಕ್ಕಲತನ ಸಾಗುವದಿಲ್ಲ; ಆದರೆ ಉಳಿದ ಕಡೆಯಲ್ಲಿ ಭೂಮಿಯು ನೀರು ದೊರೆದರೆ ಚನ್ನಾಗಿ ಬೆಳೆಯುತ್ತದೆ. ಜಾಕೋಬಾಬಾದವೆಂಬದೊಂದೇ ತಕ್ಕಮ

ಟ್ಟಿಗೆ ದೊಡ್ಡ ಗ್ರಾಮವದೆ. ಅಲ್ಲಿ ದಂಡಿನ ಪಾಳ್ಯವುಂಟು. ಜನಸಂಖ್ಯೆ ೧೧,೩೫೨.

೨. ಶಿಕಾರಪುರ.-ಈ ಜಿಲ್ಹೆಯು ಅಪ್ಪರ ಸಿಂಧ ಫ್ರಂಟೆಯರದ ದಕ್ಷಿಣಕ್ಕಿರುತ್ತದೆ. ಇದರಲ್ಲಿ ೧೭ ತಾಲೂಕುಗಳುಂಟು; ಭೂಮಿ ಸಮನಾದದ್ದು, ಹೊಳೆಯು ಆಗಾಗ್ಗೆ ತುಂಬುತ್ತದೆ. ಉರುಟ ಬಟ್ಟೆಗಳೂ, ಆನೆಹಲ್ಲಿನ ಆಟದ ಸಾಮಾನುಗಳೂ, ಮಣ್ಣಿನ ಪಾತ್ರೆಗಳೂ, ಈ ಜಿಲ್ಹೆಯಲ್ಲಿ ಹುಟ್ಟುತ್ತವೆ.

ವ್ಯಾಪಾರದ ಪ್ರಸಿದ್ಧ ಪಟ್ಟಣಗಳು ಎರಡುಂಟು:-ಶಿಕಾರಪುರ, ( ಜನಸಂಖ್ಯೆ ೪೨,೪೯೭ ); ಸಕ್ಕರ ( ಜನಸಂಖ್ಯೆ ೨೭,೩೮೯ ); ಮೊದಲನೇ ಪಟ್ಟಣಕ್ಕೆ ಖೋರಾಸಾನಘಟ್ಟದಿಂದ, ಎರಡನೇದಕ್ಕೆ ಬೋಲಿನ್ ಘಟ್ಟದಿಂದ ಪಶ್ಚಿಮ ದೇಶಗಳ ಸರಕುಗಳು ಬರುತ್ತವೆ. ಲಾಡಖಾನ (ಜನಸಂಖ್ಯೆ ೧೩,೧೮೮); ರೋರಿ ( ಜನಸಂಖ್ಯೆ ೧೦,೨೨೪ ) ಎಂಬ ಪಟ್ಟಣಗಳಾದರೂ ತಕ್ಕಮಟ್ಟಿಗೆ ದೊಡ್ಡವಿರುತ್ತವೆ.

೩. ಕರಾಚಿ ಜಿಲ್ಹೆ.—ಇದು ಶಿಕಾರಪುರ ಜಿಲ್ಹೆಯ ದಕ್ಷಿಣಕ್ಕಿರುತ್ತದೆ. ಇದರಲ್ಲಿ ೧೩ ತಾಲೂಕುಗಳು. ಈ ಜಿಲ್ಹೆಯಲ್ಲಿ ಮೂರು ಭಾಗಗಳು ಮಾಡಲ್ಪಟ್ಟವೆ. ೧ ಪಶ್ಚಿಮದಿಕ್ಕಿನ ಗುಡ್ಡದ ನಾಡು. ಇದರಲ್ಲಿ ಮಳೆಯಾಗುವದು ಅಪರೂಪ; ೨ ಸಿಂಧು ತೀರದ ಮಧ್ಯ ಪ್ರದೇಶ, ಬೆಳೆಯುಳ್ಳದ್ದು; ೩ ದಕ್ಷಿಣ ದಿಕ್ಕಿನಲ್ಲಿ ಹೊಸದಾಗಿ ಹುಟ್ಟಿದ ತ್ರಿಕೋಣಾಕೃತಿಯಾದ ಕೊಳಚಿ ನೀರಿನ ಪ್ರದೇಶವು; ಇದು ರೋಗಕಾರಕವದೆ.

ನೂಲಿನ ಬಟ್ಟೆಗಳು, ಕಾತಿಯ ತಟ್ಟುಗಳು ಮಣ್ಣಿನ ಪಾತ್ರೆಗಳು, ಈ ಜಿಲ್ಹೆಯಲ್ಲಿ ತಯಾರಾಗುತ್ತವೆ.

ಮುಖ್ಯ ಪಟ್ಟಣ ಕರಾಚಿಯು ( ಜನಸಂಖ್ಯೆ ೭೩,೫೬೦ ); ಇಲ್ಲಿ ದಂಡಿನ ಪಾಳ್ಯವುಂಟು. ಇದು ಈ ಇಲಾಖೆಯಲ್ಲಿ ೫ ನೇ ದೊಡ್ಡ ಪಟ್ಟಣವುಂಟು. ಈ ಪಟ್ಟಣದ ಬಂದರವು ಹೆಸರಾದದ್ದು; ಅದರಲ್ಲಿ ಹಡಗಗಳಿಗೆ ಬಳಿತಾಗಿ ಆಶ್ರಯ

ವಿರುತ್ತದೆ. ಶಿಕಾರ್ಪು (ಜನಸಂಖ್ಯೆ ೮,೮೩೦), ಕೊತ್ರಿ (ಜನಸಂಖ್ಯೆ ೮,೯೨೨), ಎಂಬ ಪಟ್ಟಣಗಳಾದರೂ ತಕ್ಕಮಟ್ಟಿಗೆ ದೊಡ್ಡವಿರುತ್ತವೆ.

೪. ಹೈದರಾಬಾದ ಜಿಲ್ಹೆ.—ಇದು ಸಿಂಧು ನದದ ಪೂರ್ವದಲ್ಲಿ, ಕರಾಚಿ ಜಿಲ್ಹೆ, ಕಚ್ಛದ ರಣ, ಇವುಗಳ ಉತ್ತರಕ್ಕಿರುತ್ತದೆ. ಇದರಲ್ಲಿ ೧೩ ತಾಲೂಕುಗಳುಂಟು. ಭೂಮಿಯು ಹೆಚ್ಚಾಗಿ ಬೈಲಾದದ್ದು, ಕಾಲಿವೆಗಳು ಬಹಳ, ಆದರೂ ದೊಡ್ಡ ದೊಡ್ಡ ಅಡವಿಗಳುಂಟು. ಹಾಳು ಪ್ರದೇಶವಾದರೂ ಬಹಳ; ಆದರೆ ಅಲ್ಲಿ ಉಪ್ಪು ಹುಟ್ಟುತ್ತದೆ.

ಸಿಂಧ ದೇಶದಲ್ಲೆಲ್ಲ ಹೈದರಾಬಾದವೇ ವ್ಯಾಪಾರದ ಮುಖ್ಯಸ್ಥಳವು. ಇಲ್ಲಿ ಹುಟ್ಟುವ ರತ್ನಗಂಬಳಿಗಳೂ, ನೂಲು ರೇಶಿಮೆಗಳ ವಸ್ತ್ರಗಳೂ, ಮಣ್ಣಿನ ಪಾತ್ರೆಗಳೂ, ಚರ್ಮದ ಸಾಮಾನುಗಳೂ ಬಹಳ ಪ್ರಸಿದ್ಧ ಉಂಟು. ಇಲ್ಲಿಯ ಜನಸಂಖ್ಯೆ ೮,೧೮೩. ಹೈದರಾಬಾದವು ಸಿಂಧ ದೇಶದ ಅಮೀರರ ರಾಜಧಾನಿ ಇತ್ತು. ಈ ಪಟ್ಟಣದ ಹತ್ತರ ಮಿಯಾನೀ ಎಂಬಲ್ಲಿ ಸರ್ ಚಾರ್ಲಸ್ ನೇಪಿಯರನೆಂಬ ಸರದಾರನು ಅಮೀರರನ್ನು ಗೆದ್ದನು.

೫. ಥರಪಾರಕರ ಜಿಲ್ಹೆ.—ಈ ಭಾಗವು ಹೈದರಾಬಾದ ಜಿಲ್ಹೆಯ ಪೂರ್ವಕ್ಕುಂಟು. ಇದರಲ್ಲಿ ೭ ತಾಲೂಕುಗಳು. ಈ ಜಿಲ್ಹೆಯಲ್ಲಿಯೂ ಮೂರು ಭಾಗಗಳು ಮಾಡಲ್ಪಟ್ಟವೆ. ೧ ಪಶ್ಚಿಮದಲ್ಲಿ ಪೂರ್ವನಾರಾ ಎಂಬ ಸಮನೆಲದ ಬೈಲು, ಈ ಬೈಲಿನಲ್ಲಿ ಕಾಲಿವೆಗಳು ಬಹಳ. ೨ ಮಧ್ಯದಲ್ಲಿ ಥರ, ಈ ದೊಡ್ಡ ಅರಣ್ಯದಲ್ಲಿ ಅಲ್ಲಲ್ಲಿಗೆ ಉಸುಬಿನ ದಿನ್ನೆಗಳಿವೆ. ೩ ಆಗ್ನೇಯಕ್ಕೆ ಪಾರಕರವೆಂಬ ಪ್ರದೇಶವು, ಇದು ಕಚ್ಛದ ರಣದಲ್ಲಿ ನಡುಗಡ್ಡೆಯ ಹಾಗೆ ಇರುತ್ತದೆ. ಈ ಜಿಲ್ಹೆಯಲ್ಲಿ ಮಳೆ ಬಹಳ ಕಡಿಮೆ. ಥರ ಎಂಬ ಅಡವಿಯಲ್ಲಿಯೂ ಪಾರಕರದಲ್ಲಿಯೂ ನೀರು ದುರ್ಲಭ. ಈ ಜಿಲ್ಹೆಯಲ್ಲಿ ಶಕಲಾತಿ, ರತ್ನಗಂಬಳಿ, ಚರ್ಮದ ಸಾಮಾನುಗಳು ಹುಟ್ಟುತ್ತವೆ.

ಉಮರಕೋಟ ಎಂಬ ಗ್ರಾಮವು ತಕ್ಕಮಟ್ಟಿಗೆ ದೊಡ್ಡ ದಿರುತ್ತದೆ.

೬. ಖೈರಪುರದ ಸಂಸ್ಥಾನ.–ಇದು ಥರಪಾರಕರ ಜಿಲ್ಹೆಯ ಉತ್ತರಕ್ಕೆ ಮೀರ ಫೈಜ ಮಹಮದಖಾನ ಎಂಬ ಸಂಸ್ಥಾನಿಕನ ವಶದಲ್ಲಿರುತ್ತದೆ.

---

## ೩ ನೇ ಭಾಗ.

### ಕಚ್ಛ.

ಕಚ್ಛ ಪ್ರಾಂತವು ಸಿಂಧ ದೇಶದ ಆಗ್ನೇಯಕ್ಕಿರುತ್ತದೆ. ಇದರ ಉತ್ತರ, ಪೂರ್ವ, ಆಗ್ನೇಯ ದಿಕ್ಕುಗಳಲ್ಲಿ ರಣವೆಂಬ ಬೈಲು; ದಕ್ಷಿಣ ನೈಋತ್ಯಗಳಲ್ಲಿ ಕಚ್ಛದ ಅಖಾತವೂ, ಅರಬೀ ಸಮುದ್ರವೂ, ವಾಯುವ್ಯಕ್ಕೆ ಕೋರೀ ಎಂಬ ಹೊಳೆ (ಸಿಂಧು ನದದ ಪೂರ್ವಶಾಖೆ) ಉಂಟು.

ರಣವೆಂಬುವದು ದೊಡ್ಡದೊಂದು ತೇವುಳ್ಳ ಉಸುಬಿನ ಬೈಲುಂಟು. ಮಳೆಗಾಲದಲ್ಲಿ ಅದರೊಳಗೆ ಬಹಳ ನೀರು ತುಂಬಿ ನಿಲ್ಲುತ್ತದೆ. ಆಗ ಕಚ್ಛ ಪ್ರಾಂತವು ನಡುಗಡ್ಡೆಯ ಹಾಗೆ ಕಾಣಿಸುತ್ತದೆ.

ಪರ್ವತಗಳು.–ದಕ್ಷಿಣ ದಿಕ್ಕು ಹೊರ್ತಾಗಿ ಈ ಪ್ರಾಂತದ ಸುತ್ತುಮುತ್ತು ಗುಡ್ಡಗಳ ನಾಲ್ಕು ಸಾಲುಗಳಿರುತ್ತವೆ. ಆ ದಕ್ಷಿಣದ ಪ್ರದೇಶವು ತೀರ ಸಮನೆಲವಾಗಿ ಬಳಿತಾಗಿ ಫಲವುಳ್ಳದ್ದಿರುತ್ತದೆ. ಮುಖ್ಯ ಗುಡ್ಡದ ಸಾಲುಗಳು ಮೂರುಂಟು. ಅವು ಪೂರ್ವ ಪಶ್ಚಿಮವಾಗಿ ಹಬ್ಬಿರುತ್ತವೆ. ೧ ಉತ್ತರಧಾರವೆಂಬ ಪರ್ವತಾವಳಿಯು ಪಶ್ಚಿಮದಿಂದ ಪೂರ್ವಕ್ಕೆ ರಣದೊಳಗಿಂದ ಚೋರವಾಡೆಯ ಕಡೆಗೆ ಹೋಗುತ್ತದೆ. ಇದರ ಕಾಳೋ ಎಂಬದೊಂದು ಶಿಖರವು ಎಲ್ಲಕ್ಕೂ ಹೆಚ್ಚು ಎತ್ತರವದೆ. ೨ ಮಧ್ಯಧಾರವೆಂಬ ಪರ್ವತಾವಳಿಯು ಕಚ್ಛದ ಉತ್ತರಕ್ಕೆ ಅದಕ್ಕೂ ರಣಕ್ಕೂ ನಡುವೆ ಇರುತ್ತದೆ. ಇದರ ಧಿಣೋಧರವೆಂಬ ಶಿಖರವು ೧,೨೬೮ ಫೂಟು ಎತ್ತರವದೆ.

೩ ಚಾವಡಾ ಎಂಬ ಪರ್ವತಾವಳಿಯು ಭುಜದ ದಕ್ಷಿಣಕ್ಕೆ ಪೂರ್ವ ಪಶ್ಚಿಮ ಹಬ್ಬಿದೆ. ಇದರ ನನಾವೊ ಎಂಬ ಶಿಖರವು ೧,೪೨೪ ಘೂಟು ಎತ್ತರವದೆ.

ಹೊಳೆಗಳು.—ಈ ಪ್ರಾಂತದಲ್ಲಿ ಹೇಳತಕ್ಕಂಥ ದೊಡ್ಡ ನದಿಗಳಿಲ್ಲ. ಆದರೂ ನಾಗಮತಿ, ರತ್ನಾವತಿ, ಖಾರೀ, ಎಂಬ ಹೊಳೆಗಳಲ್ಲಿ ೧೨ ತಿಂಗಳೂ ನೀರು ಹರಿಯುತ್ತಿರುತ್ತದೆ.

ಕಚ್ಛ ಪ್ರಾಂತವು ಒಬ್ಬ ರಜಪೂತ ಅರಸನ ವಶದಲ್ಲುಂಟು; ಅವನಿಗೆ ಕಚ್ಛದ ರಾವನೆಂದೆನ್ನುವರು. ಇವನ ಬಳಗದವರು ಬಹು ಜನರುಂಟು. ಅವರಿಗೆ ಈ ಸಂಸ್ಥಾನದ ಕೆಲವು ಭಾಗಗಳು ಹಂಚಿಕೊಡಲ್ಪಟ್ಟವೆ. ಈ ಸಂಸ್ಥಾನದ ರಾಜಧಾನಿ ಭುಜ ಪಟ್ಟಣವು. ಈ ಪಟ್ಟಣವನ್ನು ರಾವ ಶ್ರೀ ಖೆಂಗಾರಜೀ ಎಂಬ ಅರಸನು ಸಂವತ್ ೧೬೦೫ ನೇ ವರ್ಷ ಕಟ್ಟಿಸಿದನು. ಇದರಲ್ಲಿ ೨೨,೩೦೮ ಜನರುಂಟು. ಶ್ರೀಪ್ರಾಗಮಲಜೀ ಎಂಬ ರಾವನು ಯುರೋಪದ ಪದ್ಧತಿಯಂತೆ ಕಟ್ಟಿಸಿದ ಹೊಸ ಅರಮನೆಯು ಬಹು ರಮಣೀಯವದೆ. ಈ ಸಂಸ್ಥಾನದಲ್ಲಿ ಮಾಂಡವೀ ಎಂಬ ಬಂದರವು ಪ್ರಸಿದ್ಧ. ಅಲ್ಲಿ ೩೫,೯೮೦ ಜನರು ವಾಸಿಸುತ್ತಾರೆ; ವ್ಯಾಪಾರವು ಬಹಳ ಸಾಗುತ್ತದೆ. ಹಡಗಗಳ ಉಪಯೋಗಕ್ಕಾಗಿ ಇಲ್ಲಿ ಒಂದು ದೀಪಸ್ತಂಭವನ್ನು ಕಟ್ಟಿದ್ದಾರೆ. ಇದಲ್ಲದೆ ಕಚ್ಛಪ್ರಾಂತದಲ್ಲಿ ಮುಂಧರಾ, ಲಾಖಪತ, ಜಖಾವು, ತುಣಾ ಎಂಬ ಬೇರೆ ಬಂದರಗಳು ಉಂಟು. ಸುಮರಿರೋಹ, ಭದ್ರೇಶ್ವರ, ಕೇರಾ, ಕಂಥಕೋಟ ಎಂಬ ಪಟ್ಟಣಗಳು ಪ್ರಾಚೀನ ಕಾಲದಿಂದ ಹೆಸರಾದಂಥವು; ಇವುಗಳಲ್ಲಿ ಜೈನಧರ್ಮದ ಗುಡಿಗಳುಂಟು. ಇವಲ್ಲದೆ ಅಂಜರ (ಜನಸಂಖ್ಯೆ ೧೨,೫೮೪), ರಾಪರ, ಬಚಾ, ಬೆಲಾ, ನಳಿಯಾ, ಕೋಥಾರಾ, ತೇರಾ ಎಂಬ ಪಟ್ಟಣಗಳು ತಕ್ಕಮಟ್ಟಿಗೆ ದೊಡ್ಡವಿರುತ್ತವೆ.

ಈ ಸಂಸ್ಥಾನದಲ್ಲಿ ೮೭೮ ಚಿಕ್ಕ ದೊಡ್ಡ ಗ್ರಾಮಗಳುಂಟು. ಕಾರಭಾರದ ಅನುಕೂಲತೆಗಾಗಿ ಇದರಲ್ಲಿ ೧೭ ಪರಗಣೆಗಳು

ಮಾಡಲ್ಪಟ್ಟವೆ. ದಿವಾಣಿ, ಫೌಜದಾರಿ, ಮುಲಕಿ, ಮುಂತಾದ ಕೆಲಸಗಳೆಲ್ಲ ಬ್ರಿಟಿಶರಾಜ್ಯದ ಪದ್ಧತಿಯಂತೆ ನಡೆಯುತ್ತವೆ. ಭುಜ, ಮಾಂಡವಿ, ಇವೆರಡು ಪಟ್ಟಣಗಳಲ್ಲಿ ಧರ್ಮಾರ್ಥ ವಾಗಿ ಔಷಧಶಾಲೆಗಳು ಸ್ಥಾಪಿಸಲ್ಪಟ್ಟವೆ.

ಇಂಗ್ಲೀಷ ಸರಕಾರದವರ ಪೊಲಿಟಿಕಲ್ ಎಜಂಟನು ಭುಜ ಪಟ್ಟಣದಲ್ಲಿ ಇರುತ್ತಾನೆ; ಅಲ್ಲಿ ಇಂಗ್ಲೀಷ ಸರಕಾರದ ದಂಡು ಸಹ ಸ್ವಲ್ಪ ಇರುತ್ತದೆ.

ಕೈಗಾರಿಕೆಗಳೂ ಹುಟ್ಟುವಳಿಗಳೂ.—ನೂಲು ರೇಶಿಮೆ ಗಳ ವಸ್ತ್ರಗಳನ್ನು ನೇಯುವ ದೊಡ್ಡ ದೊಡ್ಡ ಕಾರಖಾನೆ ಗಳು ಹಲವುಂಟು; ಜರದ ವಸ್ತ್ರಗಳ ವಿಷಯವಾಗಿ ಈ ಸಂಸ್ಥಾನವು ಹೆಸರಾದದ್ದು. ಚಿನ್ನ ಬೆಳ್ಳಿಗಳ ಚಿತ್ರವಿಚಿತ್ರ ಒಡವೆಗಳನ್ನು ಇಂಗ್ಲಂಡದ ಜನರು ಸಹ ಈ ಪ್ರಾಂತದಲ್ಲಿ ಮಾಡಿಸಿಕೊಂಡು ಹೋಗುತ್ತಾರೆ. ಇಲ್ಲಿ ಸೋರುಪ್ಪು ಸ್ವಲ್ಪ ಹುಟ್ಟುತ್ತದೆ; ಇದ್ದಲಿಯ ಕಣಿಗಳು ಕೆಲವುಂಟು; ಆದರೆ ಅವುಗಳೊಳಗಿಂದ ಇದ್ದಲಿಯನ್ನು ಯಾರೂ ತೆಗೆಯುವದಿಲ್ಲ. ಇಲ್ಲಿಂದ ತುಪ್ಪ, ಎಣ್ಣೆ, ಧಾನ್ಯಗಳು, ಕುದುರೆ, ಎಮ್ಮೆ, ಒಂಟೆ ಮುಂತಾದವುಗಳು ಪರದೇಶಕ್ಕೆ ಹೋಗುತ್ತವೆ.

---

## ೪ ನೇ ಭಾಗ.

## ಗುಜರಾಥ.

ಈ ಪ್ರಾಂತದ ಉತ್ತರಕ್ಕೆ ರಜಪೂತಸ್ಥಾನವು; ಪಶ್ಚಿಮಕ್ಕೆ ಕಚ್ಛದ ಆಖಾತ, ರಣ, ಅರಬೀಸಮುದ್ರ; ದಕ್ಷಿಣಕ್ಕೆ ಕೊಂಕಣ; ಪೂರ್ವಕ್ಕೆ ರಜಪೂತ ಸಂಸ್ಥಾನಗಳು, ಮಧ್ಯಹಿಂದು ಸ್ಥಾನದ ಸಂಸ್ಥಾನಗಳು, ಖಾನದೇಶ, ನಾಸಿಕಜಿಲ್ಹೆ, ಉಂಟು. ಈ ಪ್ರಾಂತದಲ್ಲಿ ಕಾಠ್ಯಾವಾಡ, ನಿಜಗುಜರಾಥ, ಎಂಬವೆರಡು ಭಾಗಗಳುಂಟು. ಕಾಠ್ಯಾವಾಡವೆಂಬ ದ್ವೀಪಕಲ್ಪವು ಕಚ್ಛದ ಆಖಾತಕ್ಕೂ ಖಂಬಾಯತದ ಆಖಾತಕ್ಕೂ ನಡುವೆ ಇರು

ತ್ತದೆ. ನಿಜಗುಜರಾಥದ ಭೂಮಿಯು, ಉತ್ತರಭಾಗದಲ್ಲಿ ಹೊರ್ತಾಗಿ, ಬೆಳೆಯುಳ್ಳದ್ದಿರುತ್ತದೆ. ಅದರಲ್ಲಿ ತಗ್ಗು ದಿನ್ನೆಗಳಿಲ್ಲ.

ಈ ಪ್ರಾಂತದೊಳಗಿನ ಇಂಗ್ಲೀಷರ ಸೀಮೆಯಲ್ಲಿ ೫ ಜಿಲ್ಹೆಗಳುಂಟು. ಉತ್ತರದಿಂದ ಅವುಗಳ ವಿವರವು— ಅಹಮ್ಮದಾಬಾದ, ಖೇಡಾ, ಪಂಚಮಹಾಲ, ಭಡೋಚ, ಸುರತ.

೧. ಅಹಮ್ಮದಾಬಾದ ಜಿಲ್ಹೆ. — ಗುಜರಾಥದಲ್ಲಿ ಇದು ಎಲ್ಲಕ್ಕೂ ಉತ್ತರದ ಜಿಲ್ಹೆ ಇರುತ್ತದೆ. ಇದರಲ್ಲಿ ೭ ತಾಲೂಕುಗಳುಂಟು. ಅವುಗಳ ಹೆಸರುಗಳು—ಪ್ರಾಂತೀಜ, ವಿರಮಗಾವ, ಧೋಲ್ಕಾ, ದಸಕ್ರೋಯಿ ( ಅಹಮ್ಮದಾಬಾದ ), ಧಂಧುಕಾ, ಘೋಘೋ, ಸಾಣಂದ.

ಭೂಮಿ ಮತ್ತು ಹೊಳೆಗಳು:—ಈ ಜಿಲ್ಹೆಯ ಉತ್ತರ ಭಾಗದಲ್ಲಿ ಸಣ್ಣ ಗುಡ್ಡಗಳು ಬಹಳ. ತೀರ ಪಶ್ಚಿಮ ಪ್ರದೇಶದಲ್ಲಿ ಹೊಳೆಗಳು ಮೇಲೆ ಮೇಲೆ ತುಂಬುವದರಿಂದ ಅಲ್ಲಿ ಒಕ್ಕಲತನವು ಚನ್ನಾಗಿ ಸಾಗುವದಿಲ್ಲ. ಉಳಿದ ಯಾವತ್ತು ಭಾಗವು ಸಮನೆಲದ ಬೈಲಾಗಿರುತ್ತದೆ. ಭೂಮಿ ಬಹಳ ಬೆಳೆಯುಳ್ಳದ್ದು; ಒಕ್ಕಲತನವು ಚನ್ನಾಗಿ ನಡೆಯುತ್ತದೆ. ಈ ಜಿಲ್ಹೆಯಲ್ಲಿ ನೀರು ಸಮೃದ್ಧಿಯಾಗಿರುತ್ತದೆ. ಮುಖ್ಯ ಹೊಳೆ ಸಾಬರಮತಿಯು; ಅದರ ಹೊರ್ತು ಚಿಕ್ಕ ಹೊಳೆಗಳು ಹಲವುಂಟು.

ಪಟ್ಟಣಗಳು.—ಸಾಬರಮತಿಯ ಧಡದಲ್ಲಿ ಅಹಮ್ಮದಾಬಾದ; ಇದರಲ್ಲಿ ೧,೨೪,೭೬೭ ಜನರು ವಾಸಿಸುತ್ತಾರೆ. ಇದು ಈ ಇಲಾಖೆಯಲ್ಲಿ ಮುಂಬಯಿ ಹೊರ್ತಾಗಿ ಎಲ್ಲಕ್ಕೂ ದೊಡ್ಡ ಪಟ್ಟಣವು. ಈ ಪಟ್ಟಣವನ್ನು ಸುಲ್ತಾನ ಅಹಮ್ಮದನೆಂಬ ಬಾದಶಹನು ಸನ್ ೧೪೧೧ ನೇ ವರ್ಷ ಕಟ್ಟಿಸಿದನು. ಪೂರ್ವಕಾಲದಲ್ಲಿ ಇದು ಗುಜರಾಥದ ರಾಜಧಾನಿಯಾಗಿತ್ತು. ಇದರಲ್ಲಿ ಈಗ ವ್ಯಾಪಾರವು ಬಹಳ ಸಾಗುತ್ತದೆ. ಇಲ್ಲಿಯ ಮಶ್ರು, ಕಿನಕಾಬು, ಧೋತ್ರಗಳು, ಶೀರೆಗಳು, ಬಹಳ

ಪ್ರಸಿದ್ಧವುಂಟು. ಈ ಪಟ್ಟಣದಲ್ಲಿ ನೋಡತಕ್ಕಂಥ ಹಳೆ ಇಮಾರತುಗಳು ಹಲವುಂಟು. ವಿರಮಗಾವ (ಜನಸಂಖ್ಯೆ ೧೮,೯೯೦), ಧೋಲ್ಕಾ (ಜನಸಂಖ್ಯೆ ೧೭,೭೧೬), ಇವೆರಡು ಕಡಿಮೇ ಪ್ರತಿಯ ಪ್ರಸಿದ್ಧ ಪಟ್ಟಣಗಳು. ಧೋಲರಾ (ಜನಸಂಖ್ಯೆ ೧೦,೩೦೧), ಬಂದರವು ಹೆಸರಾದದ್ದು. ಈ ಬಂದರದಿಂದ ಉತ್ತರ ಗುಜರಾಥದ ಯಾವತ್ತು ವ್ಯಾಪಾರದ ಜೀನಸುಗಳು ಪರಸ್ಥಳಕ್ಕೆ ಹೋಗುತ್ತವೆ. ಗುಜರಾಥದಲ್ಲಿ ಹುಟ್ಟುವ ಅರಳೆಯು ಈ ಪಟ್ಟಣದ ಹೆಸರಿನಿಂದ ಪ್ರಸಿದ್ಧವಿದೆ. ಘೋಘೋ (ಜನಸಂಖ್ಯೆ ೭,೦೬೩) ಎಂಬದೊಂದು ಎರಡನೇ ಬಂದರವುಂಟು. ಧಂಧುಕಾ (ಜನಸಂಖ್ಯೆ ೧೦,೦೪೪), ಪ್ರಾಂತೀಜ (ಜನಸಂಖ್ಯೆ ೮,೩೫೩) ಇವು ತಕ್ಕಮಟ್ಟಿಗೆ ದೊಡ್ಡವಾದ ಕಸಬೆಯ * ಗ್ರಾಮಗಳುಂಟು.

ಪಾಟಡಿಯ ಹತ್ತರ ಖಾರಾಘೋಡಾ ಎಂಬಲ್ಲಿ ಉಪ್ಪು ಮಾಡುವದೊಂದು ದೊಡ್ಡ ಕಾರಖಾನೆ ಇರುತ್ತದೆ. ಅಲ್ಲಿಂದ ಉಪ್ಪು ತರುವದಕ್ಕಾಗಿ ವಿರಮಗಾವದಿಂದ ಉಗಿಬಂಡಿಯ ಮಾರ್ಗದೊಂದು ಶಾಖೆಯನ್ನು ಒಯಿದಿರುತ್ತಾರೆ. ಈ ಉಪ್ಪು ಮುಂಬಯಿ ಇಲಾಖೆಯಲ್ಲೆಲ್ಲ ಮೇಲಾದದ್ದೆಂದು ಹೇಳುತ್ತಾರೆ.

೨. ಖೇಡಾ ಜಿಲ್ಹೆ.—ಈ ಜಿಲ್ಹೆಯು ಅಹಮ್ಮದಾಬಾದ ಜಿಲ್ಹೆಯ ಪೂರ್ವ ದಕ್ಷಿಣ ದಿಕ್ಕುಗಳಲ್ಲಿಯೂ ಮಹೀನದಿಯ ಉತ್ತರಕ್ಕೂ ಪಶ್ಚಿಮಕ್ಕೂ ಇರುತ್ತದೆ. ಇದರಲ್ಲಿ ೭ ತಾಲೂಕುಗಳುಂಟು; ಅವು—ಕಪಟವಂಜ, ಠಾಸರಾ, ನಡಿಯಾದ, ಮೆಮುದಾಬಾದ, ಮಾತರ, ಆನಂದ, ಬೋರಸಾದ.

ಭೂಮಿ.–ಈ ಜಿಲ್ಹೆಯ ಈಶಾನ್ಯ ದಿಕ್ಕಿನ ಭೂಮಿ ಸ್ವಲ್ಪ ಎತ್ತರವದೆ. ಬೇರೆ ಎಲ್ಲ ಕಡೆಯಲ್ಲಿ ಭೂಮಿಯು ಬಂದೇ ಸಮನಾಗಿರುತ್ತದೆ. ನೀರು ವಿಪುಲ, ಒಕ್ಕಲತನ ಮೇಲಾದದ್ದು; ಅದೇ ಇಲ್ಲಿಯ ನಿವಾಸಿಗಳ ಮುಖ್ಯ ಉದ್ಯೋಗವು.

* ಮಹಾಲಿಗಿಂತ ಸಣ್ಣ ವಿಭಾಗದ ಮುಖ್ಯ ಗ್ರಾಮವು.

ಹೊಳೆಗಳು—ಮಹಿ, ಸಾಬರಮತಿ, ಇವೆರಡು ಮುಖ್ಯ ಹೊಳೆಗಳು. ಇವಲ್ಲದೆ ವಾತ್ರಕ, ಮೇಶ್ವೋ, ಶೇಡಿ ಎಂಬ ತಕ್ಕಮಟ್ಟಿಗೆ ದೊಡ್ಡವಾದ ಹೊಳೆಗಳು ಮಹೀನದಿಗೆ ಕೂಡುತ್ತವೆ.

ಪಟ್ಟಣಗಳು—ಖೇಡಾ (ಜನಸಂಖ್ಯೆ ೧೨,೬೪೦) ಪಟ್ಟಣವು ಜಿಲ್ಹೆಯ ಮುಖ್ಯ ಗ್ರಾಮವದೆ. ಈ ಊರ ಕೋಟೆಯು ವಾತ್ರಕ ಎಂಬ ಹೊಳೆಯು ಶೇಢಿ ಎಂಬ ಹೊಳೆಗೆ ಕೂಡುವ ಸ್ಥಳದಲ್ಲಿ ಕಟ್ಟಿರುತ್ತದೆ. ನಡಿಯಾದವು (ಜನಸಂಖ್ಯೆ೨೮,೩೦೪) ಈ ಜಿಲ್ಹೆಯಲ್ಲಿ ದೊಡ್ಡ ಪಟ್ಟಣವು. ಕಪಟವಂಜ ( ಜನ ಸಂಖ್ಯೆ ೧೪,೪೪೨ ) ಎಂಬದಾದರೂ ತಕ್ಕಮಟ್ಟಿಗೆ ದೊಡ್ಡ ಪಟ್ಟಣವದೆ. ಇಲ್ಲಿ ಬಳೆ, ಸಬ್ಬಕಾರಗಳನ್ನು ಮಾಡುವ ಕಾರಖಾನೆಗಳುಂಟು. ಉಮರೆಠ ( ಜನಸಂಖ್ಯೆ ೧೪,೬೪೩ ) ಎಂಬದು ಮತ್ತೊಂದು ಪ್ರಸಿದ್ಧ ಪಟ್ಟಣವು. ಬೋರಸಾದ ( ಜನಸಂಖ್ಯೆ ೧೨,೨೨೮ ) ಎಂಬಲ್ಲಿ ದೊಡ್ಡದೊಂದು ಕೋಟೆ ಯುಂಟು. ಇವಲ್ಲದೆ ಮಹುದಾ ( ಜನಸಂಖ್ಯೆ ೯,೪೪೦ ), ಆನಂದ ( ಜನಸಂಖ್ಯೆ ೯,೨೭೧ ) ಓಡ್ (ಜನಸಂಖ್ಯೆ ೮,೪೨೩), ಮೆಮದಾಬಾದ ( ಜನಸಂಖ್ಯೆ ೮,೧೭೩ ), ಎಂಬ ಕಸಬೆಯ ಗ್ರಾಮಗಳುಂಟು. ಡಾಕೋರ ( ಜನಸಂಖ್ಯೆ ೭,೭೭೧ ) ಎಂಬ ಕ್ಷೇತ್ರದಲ್ಲಿ ರಣಛೋಡಜೀ ಎಂಬ ದೇವರ ಗುಡಿಯೂ ಗೋಮತೀ ಕುಂಡವೂ ಉಂಟು. ಪ್ರತಿ ಹುಣ್ಣಿವೆಗೆ ಇಲ್ಲಿ ಜಾತ್ರೆಯಾಗುತ್ತದೆ. ಆನಂದದಿಂದ ಡಾಕೋರಿನವರೆಗೆ ಲೋಹಮಾರ್ಗದ ಶಾಖೆಯನ್ನು ಒಯ್ದಿದ್ದಾರೆ.

೩. ಪಂಚಮಹಾಲ ಜಿಲ್ಹೆ.—ಇದು ಮಹೀನದಿಯ ಪೂರ್ವಕ್ಕಿರುತ್ತದೆ. ರೇವಾಕಾಂಠಾ ಏಜನ್ಸಿಯೊಳಗಿನ ಬಾರಿಯಾ ಎಂಬ ಸಂಸ್ಥಾನದಿಂದ ಈ ಜಿಲ್ಹೆಯಲ್ಲಿ ಈಶಾನ್ಯ, ನೈಋತ್ಯ ಎಂಬ ಎರಡು ಭಾಗಗಳಾಗಿವೆ.

ಭೂಮಿ.—ಈಶಾನ್ಯ ಭಾಗಕ್ಕಿಂತ ನೈಋತ್ಯ ಭಾಗವು ಹೆಚ್ಚು ಬೆಳೆಯುಳ್ಳದ್ದು. ಪಾವಗಡದ ಗುಡ್ಡದ ಹೊರತು

ಈ ಪ್ರಾಂತದಲ್ಲಿ ಗುಡ್ಡಗಳಿಲ್ಲ. ಉತ್ತರ ಭಾಗದಲ್ಲಿ ಕೆಲವು ದರಿಗಳಲ್ಲಿ ಬೆಳೆ ಚನ್ನಾಗಿ ಬರುತ್ತದೆ. ಆದರೆ ಅಲ್ಲಿಯ ಭೂಮಿಯು ಸಾಧಾರಣವಾಗಿ ಮರಡಿಸಾಲು; ಒಕ್ಕಲತನ ಬಹಳ ಸಾಗುವದಿಲ್ಲ. ಈ ಜಿಲ್ಹೆಯ ಜನರ ಮುಖ್ಯ ಉದ್ಯೋಗ ಒಕ್ಕಲತನವೇ. ಭಿಲ್ಲರ ವಸ್ತಿ ಬಹಳಿರುತ್ತದೆ.

ಈ ಪ್ರಾಂತದಲ್ಲಿ ಮಹೀ ನದಿಯೊಂದೇ ದೊಡ್ಡ ಹೊಳೆಯು. ಗೋದ್ರಾ, ಕಲೋಲ, ದೋಹದ ಎಂಬ ಮೂರು ತಾಲೂಕುಗಳುಂಟು. ಗೋದ್ರಾ (ಜನಸಂಖ್ಯೆ ೧೨,೩೯೪), ದೋಹದ (ಜನಸಂಖ್ಯೆ ೧೩,೩೪೨), ಇವೆರಡು ತಕ್ಕಮಟ್ಟಿಗೆ ದೊಡ್ಡ ಪಟ್ಟಣಗಳುಂಟು. ಝಾಲೋದ (ಜನಸಂಖ್ಯೆ ೫, ೫೭೯) ವೆಂಬದೊಂದು ದೊಡ್ಡ ಊರುಂಟು. ಇವುಗಳ ಹೊರ್ತು ೨ ಪೇಠೆಗಳುಂಟು.

ಈ ಪ್ರಾಂತವು ಮೊದಲು ಸಿಂದ್ಯನ ವಶದಲ್ಲಿತ್ತು. ಆದರೆ ಈಗ ಇಂಗ್ಲಿಷ ಸರಕಾರಕ್ಕೆ ಸೇರಿರುತ್ತದೆ.

೪. ಭಡೋಚ ಜಿಲ್ಹೆ—ಈ ಜಿಲ್ಹೆಯು ಮಹೀನದಿಯ ದಕ್ಷಿಣಕ್ಕಿರುತ್ತದೆ. ಇದರ ದಕ್ಷಿಣಕ್ಕೆ ಕೀಮ ಎಂಬ ಹೊಳೆಯುಂಟು. ಇದರಲ್ಲಿ ೫ ತಾಲೂಕುಗಳಿವೆ. ಅವು–ಭಡೋಚ, ಅಂಕಲೇಶ್ವರ, ವಾಗ್ರಾ, ಆಮೋದ, ಜಂಬುಸರ.

ಭೂಮಿ.—ಈ ಜಿಲ್ಹೆಯಲ್ಲಿ ಮೇಲಾದ ಬೆಳೆಯುಳ್ಳ ಪ್ರದೇಶವು ನರ್ಮದೆಯ ಮುಖದ ಹತ್ತರದಲ್ಲಿ ಇರುವ ಬೈಲು. ಅಡವಿ ಬಹುತರ ಎಲ್ಲಿಯೂ ಇಲ್ಲ; ಆದರೂ ಗಿಡಗಳು ಬಹಳ. ಜನರ ಮುಖ್ಯ ಉದ್ಯೋಗವು ಒಕ್ಕಲತನವು.

ನರ್ಮದೆ, ಮಹಿ, ಕೀಮ, ಇವು ಮೂರು ಈ ಜಿಲ್ಹೆಯಲ್ಲಿ ಮುಖ್ಯ ನದಿಗಳು.

ಪಟ್ಟಣಗಳು–ಈ ಜಿಲ್ಹೆಯ ಮುಖ್ಯ ಸ್ಥಳವಾದ ಭಡೋಚ ಪಟ್ಟಣವು (ಜನಸಂಖ್ಯೆ ೩೭,೨೮೧) ನರ್ಮದೆಯ ಮುಖದ ಹತ್ತರ ಇರುತ್ತದೆ. ಇಲ್ಲಿ ಅರಳೆಯನ್ನು ಒತ್ತಿ ಗಂಟು ಕಟ್ಟುವ ಕಾರಖಾನೆಗಳು ಇರುತ್ತವೆ. ವ್ಯಾಪಾರವು ಬಹಳ ಸಾಗುತ್ತದೆ. ಜಂಬುಸರ (ಜನಸಂಖ್ಯೆ ೧೧,೪೭೯), ಅಂಕಲೇಶ್ವರ (ಜನಸಂಖ್ಯೆ

೯,೫೩೫) ಇವು ವ್ಯಾಪಾರದ ದೊಡ್ಡ ಪಟ್ಟಣಗಳು. ಟಂಕಾರಿಯಾ ಬಂದರವು ಜಂಬುಸರದಿಂದ ೯ ಮೈಲು ಇರುತ್ತದೆ. ಇಲ್ಲಿಯೂ ವ್ಯಾಪಾರವು ಚನ್ನಾಗಿ ನಡೆಯುತ್ತದೆ.

ನರ್ಮದೆಯಲ್ಲಿ ಧಂತೂರಿಯಾ, ಕಾಸವಾ ಎಂಬವೆರಡು ನಡುಗಡ್ಡೆಗಳುಂಟು; ಮೊದಲನೇದರಲ್ಲಿ ಮನುಷ್ಯರ ವಸ್ತಿಯುಂಟು.

೫. ಸುರತ ಜಿಲ್ಹೆ.—ಈ ಜಿಲ್ಹೆಯು ಗುಜರಾಥದ ತೀರ ದಕ್ಷಿಣಕ್ಕಿರುತ್ತದೆ; ಇದರ ಉತ್ತರದಲ್ಲಿ ಕೀಮ ನದಿಯೂ ದಕ್ಷಿಣದಲ್ಲಿ ದಮನಗಂಗಾ ಎಂಬ ಹೊಳೆಯೂ ಉಂಟು. ಇದರಲ್ಲಿ ೮ ತಾಲೂಕುಗಳುಂಟು; ಅವು— ಪಾರ್ಡಿ, ಬಲಸಾಡ, ಚಿಖಲಿ, ಜಲಾಲಪುರ, ಬಾರಡೋಲಿ, ಮಾಂಡವಿ, ಚೌರ್‍ಯಾಯಶೀ ( ಸುರತ ), ಒಲಪಾಡ.

ಭೂಮಿ.—ದಕ್ಷಿಣಭಾಗ ಹೊರ್ತಾಗಿ ಈ ಜಿಲ್ಹೆಯೆಲ್ಲ ಸಮನೆಲವುಳ್ಳ ಬೈಲಾಗಿರುತ್ತದೆ. ಪಶ್ಚಿಮ ದಂಡೆಯಲ್ಲಿ ಸಮುದ್ರದ ಒತ್ತುಗಳು ಹಲವುಂಟು; ಅವು ಮಳೆ ಇಲ್ಲದಾಗ ಬಂದರದಂತೆ ಕೆಲಸಕ್ಕೆ ಬರುತ್ತವೆ. ಇಲ್ಲಿಯ ಜನರ ಮುಖ್ಯ ಉದ್ಯೋಗ ಒಕ್ಕಲತನವೂ, ಮೀನ ಹಿಡಿಯುವದೂ.

ಈ ಜಿಲ್ಹೆಯಲ್ಲಿ ಹೊಳೆಗಳು ಬಹಳ; ಅವುಗಳಲ್ಲಿ ತಾಪಿ ಎಲ್ಲಕ್ಕೂ ದೊಡ್ಡದು.

ಪಟ್ಟಣಗಳು.—ಈ ಜಿಲ್ಹೆಯ ಮುಖ್ಯ ಗ್ರಾಮವೂ ಮುಖ್ಯ ಬಂದರವೂ ಆದ ಸುರತ ಪಟ್ಟಣವು ( ಜನಸಂಖ್ಯೆ ೧,೦೭,೧೫೪ ) ತಾಪಿಯ ಮುಖದ ಹತ್ತರ ಇರುತ್ತದೆ. ಇದು ಈ ಇಲಾಖೆಯಲ್ಲಿ ೩ ನೇ ನಂಬರದ ದೊಡ್ಡ ಪಟ್ಟಣವು. ಇಲ್ಲಿ ವ್ಯಾಪಾರವು ಬಹಳ ಸಾಗುತ್ತದೆ; ಇಂಗ್ಲಿಷರು ಈ ಪಟ್ಟಣದಲ್ಲಿ ಸನ್ ೧೬೧೨ ನೇ ವರ್ಷ ಮೊದಲಿಗೆ ಅಂಗಡಿಯನ್ನು ಹಾಕಿದರು. ಬಲಸಾಡ ( ಜನಸಂಖ್ಯೆ ೧೩,೨೭೯ ) ಎಂಬ ಬಂದರದಲ್ಲಿಯೂ ವ್ಯಾಪಾರವು ಚನ್ನಾಗಿ ಸಾಗುತ್ತದೆ. ಈ ಬಂದರಗಳಿಂದ ಬೆಲ್ಲ, ತುಪ್ಪ, ತೇಗಿನ ಕಟ್ಟಿಗೆ

ಮುಂತಾದ ಅನೇಕ ಸರಕುಗಳು ಪರಸ್ಥಳಕ್ಕೆ ಹೋಗು ತ್ತವೆ. ರಾಂದೇರ (ಜನಸಂಖ್ಯೆ ೯,೯೧೬) ಎಂಬ ಗ್ರಾಮವು ತಾಪಿಯ ಧಡದಲ್ಲಿ ಇರುತ್ತದೆ.

---

೫ ನೇ ಭಾಗ.

## ಗುಜರಾಥದ ಸಂಸ್ಥಾನಗಳು.

ಈ ಸಂಸ್ಥಾನಗಳು ಬ್ರಿಟಿಶ್ ಸರಕಾರದ ಸೀಮೆಯ ಸುತ್ತುಮುತ್ತು ಇರುತ್ತವೆ. ಇವುಗಳ ಕ್ಷೇತ್ರಫಲ ೫೩,೭೭೯ ಚಚ್ಚೌಕು ಮೈಲು, ಜನಸಂಖ್ಯೆ ೬೪,೦೯,೯೭೫ ಈ ಸಂಸ್ಥಾನ ಗಳೆಲ್ಲ ಕೂಡಿ ೮ ಭಾಗಗಳು ಮಾಡಲ್ಪಟ್ಟವೆ. ಅವುಗಳ ವಿವರವು—

### ೧. ಕಾಠ್ಯಾವಾಡ ಏಜನ್ಸೀ.

ಈ ದ್ವೀಪಕಲ್ಪವು ರಣದ ದಕ್ಷಿಣಕ್ಕೆ ಇರುತ್ತದೆ. ಗಾಯ ಕವಾಡನ ಸಂಸ್ಥಾನಕ್ಕೆ ಸೇರಿದ ಅಮರೇಲಿ, ಒಖಾಮಂಡಲ ಗಳೆಂಬ ಮಹಾಲುಗಳು ಈ ಪ್ರಾಂತದಲ್ಲಿ ಇರುತ್ತವೆ.

ಕಾಠ್ಯಾವಾಡದಲ್ಲಿ ೫ ಪರ್ವತಗಳುಂಟು. ಅವುಗಳಲ್ಲಿ ೩,೫೦೦ ಫೂಟು ಎತ್ತರವಾದ ಗಿರನಾರವೆಂಬ ಪರ್ವತವು ಎಲ್ಲಕ್ಕೂ ಹೆಚ್ಚು ಉನ್ನತವಾದದ್ದು. ಭಾದರ, ಶೆಂತ್ರುಂಜಿ, ಮಚೂ ಎಂಬ ಮೂರು ಮುಖ್ಯ ಹೊಳೆಗಳುಂಟು.

ಕೆಲಸದ ವ್ಯವಸ್ಥೆಗಾಗಿ ಈ ಪ್ರಾಂತದಲ್ಲಿ ४ ಭಾಗಗಳು ಮಾಡಲ್ಪಟ್ಟವೆ; ಅವುಗಳಿಗೆ ಪ್ರಾಂತಗಳೆನ್ನುವರು. ಈ ಪ್ರಾಂತಗಳೆಲ್ಲ ಕೂಡಿ ಒಬ್ಬ ಪೊಲಿಟಿಕಲ್ ಏಜಂಟನಿರು ತ್ತಾನೆ. ಅವನು ರಾಜಕೋಟದಲ್ಲಿ ನಿಂತುಕೊಂಡು ಯಾವತ್ತು ಪ್ರಾಂತಗಳ ಕೆಲಸ ನೋಡುತ್ತಾನೆ. ಅವನ ಕೈಕೆಳಗೆ ನಾಲ್ವರು ಅಸಿಸ್ಟಂಟ ಪೋಲಿಟಿಕಲ್ ಏಜಂಟರುಂಟು; ಒಬ್ಬೊಬ್ಬರ ವಶದಲ್ಲಿ ಒಂದೊಂದು ಪ್ರಾಂತವು ಕೊಡ ಲ್ಪಟ್ಟದೆ.

೧ ನೇ ಪ್ರಾಂತ ಝಾಲಾವಾಡವೆಂಬುವದು. ಇದರೊಳಗಿನ ಸಂಸ್ಥಾನಿಕರು ಝಾಲ ಜಾತಿಯ ರಜಪೂತರುಂಟು. ಈ ಸಂಸ್ಥಾನಗಳಲ್ಲಿ ಧ್ರಾಂಗಂಧ್ರಾ ಎಂಬುವದು ಮುಖ್ಯ. ಅಲ್ಲಿಯ ಅರಸನಿಗೆ ರಾಜಾಸಾಹೇಬನೆನ್ನುವರು. ಇದರ ಹೊರ್ತು ವಾಕನೇರ, ವಢವಾಣ, ಲಿಮಡಿ ಮುಂತಾದ ಸಣ್ಣ ಸಂಸ್ಥಾನಗಳುಂಟು.

೨ ನೇ ಪ್ರಾಂತ ಸೋರಠ ಎಂಬುವದು. ಇದರೊಳಗಿನ ಸಂಸ್ಥಾನಿಕರು ಮುಸಲಮಾನರುಂಟು. ಜುನಾಗಡದ ಸಂಸ್ಥಾನವು ಎಲ್ಲಕ್ಕೂ ದೊಡ್ಡದು. ಅಲ್ಲಿಯ ಅರಸನಿಗೆ ನಬಾಬನೆನ್ನುವರು. ಬಾಂಟವಾ ಎಂಬ ಸಂಸ್ಥಾನದ ಮಾಲಕನಾದರೂ ಇದೇ ಮನೆತನದವನು. ಜಾಫರಬಾದವು ಜಂಜಿರೆಯ ಹಬಸೀ ಸಂಸ್ಥಾನಿಕನ ವಶದಲ್ಲುಂಟು. ಪೋರಬಂದರವೆಂಬ ಸಂಸ್ಥಾನವು ಜೈಠವಾ ಜಾತಿಯ ರಜಪೂತನದಿರುತ್ತದೆ.

೩ ನೇ ಪ್ರಾಂತ ಗೋಹಿಲವಾಡವೆಂಬುವದು. ಇದರೊಳಗಿನ ಸಂಸ್ಥಾನಗಳ ಒಡೆಯರು ಗೋಹಿಲ ಜಾತಿಯ ರಜಪೂತರುಂಟು. ಅವುಗಳಲ್ಲಿ ಭಾವನಗರದ ಸಂಸ್ಥಾನವು ಮುಖ್ಯವಾದದ್ದು. ಅಲ್ಲಿಯ ಅರಸನಿಗ ಠಾಕೂರನೆಂಬ ಪದವಿಯುಂಟು. ಪಾಲಿಟಾನಾ, ಎಂಬ ಸಂಸ್ಥಾನವು ಈ ಪ್ರಾಂತದಲ್ಲಿ ಉಂಟು.

೪ ನೇ ಪ್ರಾಂತ ಹಾಲರ ಎಂಬುವದು. ಇದರೊಳಗಿನ ಸಂಸ್ಥಾನಗಳ ಒಡೆಯರು ಜಾರಿಜಾ ಎಂಬ ಜಾತಿಯ ರಜಪೂತರುಂಟು. ಅವರಲ್ಲಿ ನವಾನಗರದ ಸಂಸ್ಥಾನಿಕನೇ ಮುಖ್ಯನು; ಅವನಿಗೆ ಜಾಮನೆಂದೆನ್ನುವರು. ಇದಲ್ಲದೆ ರಾಜಕೋಟ, ಗೊಂಡಲ, ಮೋರವೀ ಮುಂತಾದ ಬೇರೆ ಸಂಸ್ಥಾನಗಳು ಹಲವುಂಟು.

ಹುಟ್ಟುವಳಿಗಳು.—ಈ ಪ್ರಾಂತಗಳಿಂದ ಹತ್ತಿ, ಉಣ್ಣೆ, ಎಣ್ಣೆ, ಬೆಲ್ಲ, ಕುದುರೆಗಳು, ದನಗಳು ಮುಂತಾದವುಗಳು ವ್ಯಾಪಾರಕ್ಕಾಗಿ ಮುಂಬಯಿಗೆ ಹೋಗುತ್ತವೆ. ಪೋರ

ಬಂದರದಲ್ಲಿ ಇರುವ ಮನೆ ಕಟ್ಟುವ ಬಿಳೀ ಕಲ್ಲಿನ ಕಣಿಗಳು ಬಹಳ ಹೆಸರಾಗಿರುತ್ತವೆ. ಅವನ್ನು ಕಟ್ಟಿಗೆಯಂತೆ ಕರಗಸದಿಂದ ಕೊರೆಯಬಹುದು.

## ೨ ಪಾಲನಪೂರ ಏಜನ್ಸೀ.

ಗುಜರಾಥದ ಉತ್ತರ ಪ್ರದೇಶವು ಈ ಏಜನ್ಸಿಗೆ ಸೇರಿರುತ್ತದೆ. ಇದು ಕಚ್ಛದ ನೆರೆಯಲ್ಲಿರುವ ರಣದ ಪೂರ್ವಕ್ಕಿರುತ್ತದೆ.

ಭೂಮಿ ಮತ್ತು ಹುಟ್ಟುವಳಿ.— ಈ ಏಜನ್ಸಿಯ ಉತ್ತರ ಈಶಾನ್ಯ ಭಾಗಗಳಲ್ಲಿ ಗುಡ್ಡಗಳು ಬಹಳ. ಉಳಿದ ಪ್ರದೇಶವೆಲ್ಲ ಸಮನೆಲವುಳ್ಳದ್ದು. ಅದರಲ್ಲಿ ಯಾವತ್ತು ಧಾನ್ಯಗಳು ಬೆಳೆಯುತ್ತವೆ. ಪಾಲನಪುರದ ಸಂಸ್ಥಾನದಲ್ಲಿ ಹತ್ತಿ, ಅಫು, ಕಬ್ಬುಗಳು ಬೆಳೆಯುತ್ತವೆ.

ಈ ಏಜನ್ಸಿಯಲ್ಲಿ ೧೧ ಸಂಸ್ಥಾನಗಳುಂಟು. ಪಾಲನಪುರದ ಸಂಸ್ಥಾನವು ಎಲ್ಲಕ್ಕೂ ದೊಡ್ಡದು. ಇದರ ಅರಸು ಪಠಾಣ ಜಾತಿಯವನು; ಇಲ್ಲಿಯ ಜನಸಂಖ್ಯೆ ೨,೨೪,೪೦೨ ಪಾಲನಪುರಕ್ಕೆ ಬಲವಾದ ಕೋಟೆಯುಂಟು. ಎರಡನೇ ಪ್ರಸಿದ್ಧ ಪಟ್ಟಣವು ಡೀಸಾ; ಇಲ್ಲಿ ಇಂಗ್ಲೀಷ ಸರಕಾರದ ದಂಡು ಇರುತ್ತದೆ. ರಾಧನಪೂರದ ಸಂಸ್ಥಾನ ಎರಡನೇದು. ಇದರಲ್ಲಿ ೯೮,೧೨೯ ಜನರು ವಾಸಿಸುತ್ತಾರೆ; ಇದರ ಅರಸನಾದರೂ ಪಠಾಣನೇ; ಉಳಿದ ಸಂಸ್ಥಾನಿಕರಲ್ಲಿ ಕೆಲವರು ರಜಪೂತರೂ, ಕೆಲವರು ಕಾಡು ಜಾತಿಯವರೂ ಇದ್ದಾರೆ.

ಈ ಪ್ರಾಂತಕ್ಕೆ ನೇಮಿಸಲ್ಪಟ್ಟ ಪೊಲಿಟಿಕಲ್ ಸುಪರಿಂಟೆಂಡೆಂಟನು ಪಾಲನಪುರದಲ್ಲಿ ಇರುತ್ತಾನೆ.

## ೩ ಮಹಿಕಾಂಠಾ ಏಜನ್ಸೀ.

ಗುಜರಾಥದ ಈಶಾನ್ಯ ಭಾಗವೇ ಈ ಏಜನ್ಸಿಯು. ಇದರ ಉತ್ತರಕ್ಕೆ ಅಬೂ ಪರ್ವತವೂ; ಪೂರ್ವಕ್ಕೆ ಮೇವಾಡ ಪ್ರಾಂತವೂ ಉಂಟು. ಇವೆರಡೂ ದಿಕ್ಕುಗಳಲ್ಲಿ ಗುಡ್ಡಗಳೂ ಅಡವಿಯೂ ಬಹಳ; ಉಳಿದ ಭಾಗವೆಲ್ಲ ಸಮನೆಲವುಳ್ಳದ್ದು.

ಈ ಏಜನ್ಸಿಯಲ್ಲಿ ಸಾಬರಮತಿ, ವಾತ್ರಕ, ಹಾತಮತಿ, ಖಾರಿ ಎಂಬ ಅನೇಕ ಹೊಳೆಗಳುಂಟು. ಇದರಲ್ಲಿ ೬ ಪರಗಣೆಗಳಿರುತ್ತವೆ.

ಈ ಪ್ರಾಂತದಲ್ಲಿ ೫೯ ಮಂದಿ ಜಾಹಗೀರದಾರರುಂಟು. ಅವರಲ್ಲಿ ೧೮ ಮಂದಿ ರಜಪೂತರು, ಉಳಿದವರೆಲ್ಲ ಕಾಡು ಜಾತಿಯವರು. ಈದರದ ಸಂಸ್ಥಾನವು ಎಲ್ಲಕ್ಕೂ ದೊಡ್ಡದು. ಇದು ಒಬ್ಬ ರಜಪೂತ ಅರಸನ ವಶದಲ್ಲುಂಟು. ಅವನಿಗೆ ಮಹಾರಾಜನೆನ್ನುವರು. ಇದರಲ್ಲಿ ೨,೫೮,೪೨೯ ಜನರು ವಾಸಿಸುತ್ತಾರೆ. ಅರಸು ಈದರ ಪಟ್ಟಣದಲ್ಲಿ ಇರುತ್ತಾನೆ. ದಾಂಟಾ ಗ್ರಾಮದಲ್ಲಿ ಬಿಳೀ ಕಲ್ಲಿನ ಕಣಿಗಳುಂಟು.

ಈ ಪ್ರಾಂತಕ್ಕೆ ನೇಮಿಸಿದ ಪೊಲಿಟಿಕಲ್ ಏಜಂಟನು ಸಾದರಾ ಎಂಬಲ್ಲಿ ಇರುತ್ತಾನೆ.

### ೪ ರೇವಾಕಾಂಠಾ ಏಜನ್ಸಿ.

ಗುಜರಾಥದ ಪೂರ್ವ ಭಾಗವೇ ಈ ಏಜನ್ಸಿಯು. ಈ ಪ್ರಾಂತದಲ್ಲಿ ತಗ್ಗು-ದಿನ್ನೆಗಳೂ ಗುಡ್ಡಗಳೂ ಬಹಳ. ಆದರೂ ಅಲ್ಲಲ್ಲಿಗೆ ಸಮನೆಲದ ಪ್ರದೇಶವುಂಟು. ನರ್ಮದೆ, ಮಹೀ ಎಂಬ ದೊಡ್ಡ ಹೊಳೆಗಳು ಈ ಪ್ರಾಂತದಲ್ಲಿ ಹರಿಯುತ್ತವೆ.

ಈ ಏಜನ್ಸಿಯಲ್ಲಿ ಬಹಳ ಸಂಸ್ಥಾನಗಳುಂಟು. ಅವುಗಳಲ್ಲಿ ರಾಜಪಿಂಪಳಾ ಸಂಸ್ಥಾನವು ದೊಡ್ಡದು. ಇದರಲ್ಲಿ ೧,೦೪,೭೫೬ ಜನರು ವಾಸಿಸುತ್ತಾರೆ. ಈ ಸಂಸ್ಥಾನದ ಅರಸು ರಜಪೂತ ಜಾತಿಯವನು; ಅವನಿಗೆ ಮಹಾರಾಜನೆನ್ನುವರು. ಅವನು ನಾದೋದೆಂಬ ರಾಜಧಾನಿಯಲ್ಲಿ ವಾಸಿಸುತ್ತಾನೆ. ಈ ಸಂಸ್ಥಾನದಲ್ಲಿ ಬೆಲೆಯುಳ್ಳ ಕಲ್ಲುಗಳು ದೊರೆಯುತ್ತವೆ; ಕಟ್ಟಿಗೆಯ ವ್ಯಾಪಾರವು ಬಹಳ ಸಾಗುತ್ತದೆ. ಛೋಟಾ ಉದೇಪುರವೆಂಬ ಎರಡನೇ ಸಂಸ್ಥಾನದಲ್ಲಿ ೭೧,೨೧೮ ಜನರ ವಸ್ತಿಯುಂಟು. ಇಲ್ಲಿಯ ಅರಸ

ನಾದರೂ ರಜಪೂತನೇ. ಅವನಿಗೆ ಮಹಾರಾವನೆನ್ನುವರು. ಲೂನವಾಡಾ, ದೇವಗಡಬಾರಿಯಾ ಎಂಬ ತಕ್ಕಮಟ್ಟಿಗೆ ದೊಡ್ಡವಾದ ಸಂಸ್ಥಾನಗಳು ರಜಪೂತ ಅರಸರ ವಶದಲ್ಲಿರುತ್ತವೆ. ಬಾಲಾಸಿನೋರವು ಮುಸಲ್ಮಾನೀ ಅರಸನ ವಶದಲ್ಲಿರುತ್ತದೆ.

ಹುಟ್ಟುವಳಿ.—ಈ ಪ್ರಾಂತದಲ್ಲಿ ಎಲ್ಲ ಬಗೆಯ ಧಾನ್ಯಗಳು ಬೆಳೆಯುತ್ತವೆ. ಅಡವಿ ಬಹಳ ಇರುವ ಕಾರಣ ತೊಲೆಗಳು ಬಹಳ ಹುಟ್ಟುತ್ತವೆ. ಹತ್ತಿಯಾದರೂ ಸ್ವಲ್ಪ ಬೆಳೆಯುವದುಂಟು.

ಈ ಪ್ರಾಂತಕ್ಕೆ ನೇಮಿಸಲ್ಪಟ್ಟ ಪೊಲಿಟಿಕಲ್ ಏಜಂಟನು ಬಡೋದೆಯಲ್ಲಿ ಇರುತ್ತಾನೆ.

## ೫. ಗಾಯಕವಾಡನ ರಾಜ್ಯ.

ಈ ರಾಜ್ಯದ ಭಾಗಗಳು ಬೇರೆ ಬೇರೆ ಕಡೆಯಲ್ಲಿ ಇರುತ್ತವೆ. ಮುಖ್ಯ ಭಾಗವು ಭಡೋಚ ಜಿಲ್ಹೆ, ಖೇಡಾ ಜಿಲ್ಹೆ, ಪಂಚಮಹಾಲ, ರೇವಾಕಾಂತಾ ಏಜನ್ಸಿ, ಇವುಗಳ ಮಧ್ಯದಲ್ಲಿ ಇರುತ್ತದೆ. ಬಡೋದಾ ಪಟ್ಟಣವು ಇದೇ ಭಾಗದಲ್ಲಿ ಇರುತ್ತದೆ; ಅಲ್ಲಿ ಗಾಯಕವಾಡನೆಂಬ ಅರಸನಿರುತ್ತಾನೆ. ಅಲ್ಲಿ ೧,೦೧,೮೧೮ ಜನರು ವಾಸಿಸುತ್ತಾರೆ.

ಎರಡನೇ ಭಾಗವು ಸುರತ ಜಿಲ್ಹೆಯಲ್ಲಿ. ಅದರಲ್ಲಿ ನವಸರೀ, ವಸ್ರಾವೀ, ಬಾಲೇಶ್ವರ, ತಲಾರೀ, ಗಣದೇವೀ ಮುಂತಾದ ಪರಗಣೆಗಳುಂಟು.

ಮೂರನೇ ಭಾಗವು ಕಾಠ್ಯಾವಾಡದಲ್ಲಿ.—ಅದರಲ್ಲಿ ಅಮರೇಲಿ, ಓಖಾಮಂಡಲ ಎಂಬ ಪರಗಣೆಗಳೂ, ಅಮರೇಲಿ, ದ್ವಾರಕಾ ಎಂಬ ಮುಖ್ಯ ಪಟ್ಟಣಗಳೂ ಉಂಟು.

ನಾಲ್ಕನೇ ಭಾಗವು ಪಾಲನಪುರ, ಮಹೀಕಾಂತಾ ಏಜನ್ಸಿಗಳಿಗೂ, ಅಹಮದಾಬಾದ, ಖೇಡಾ ಜಿಲ್ಹೆಗಳಿಗೂ ನಡುವೆ ಇರುತ್ತದೆ. ಇದರಲ್ಲಿ ಪಟ್ಟಣ, ಸಿದಪೂರ, ವ್ಹೈಸನಾ, ಕಲೀ ಮುಂತಾದ ಪಟ್ಟಣಗಳುಂಟು.

ಖಾನದೇಶ ಜಿಲ್ಹೆಯಲ್ಲಿ ವಾಜಪೂರತರ್ಫ ಎಂಬ ಭಾಗವು ಗಾಯಕವಾಡನ ರಾಜ್ಯಕ್ಕೆ ಸೇರಿರುತ್ತದೆ.

ಹುಟ್ಟುವಳಿ.—ಈ ಸಂಸ್ಥಾನದಲ್ಲಿ ಹತ್ತಿ, ಕಬ್ಬು, ಅಫೂ ಎಲ್ಲ ಬಗೆಯ ಧಾನ್ಯಗಳು ಹುಟ್ಟುತ್ತವೆ. ಎಷ್ಟೋ ಕಡೆಯಲ್ಲಿ ವಸ್ತ್ರಗಳು ಹುಟ್ಟುತ್ತವೆ.

ಇಂಗ್ಲಿಷ ಸರಕಾರದವರ ಕಡೆಯಿಂದ ಬಡೋದೆಯಲ್ಲಿ ಒಬ್ಬ ಸ್ಪೇಶಲ್ ಕಮಿಶನರನೆಂಬ ಅಧಿಕಾರಿಯು ಇರುತ್ತಾನೆ; ಅವನಿಗೆ ಗವರ್ನರ ಜನರಲ್ಸ ಏಜಂಟನೆಂತಲೂ ಅನ್ನುವರು. ಅಲ್ಲಿ ಇಂಗ್ಲಿಷ ಸರಕಾರದ ಕೆಲವು ದಂಡು ಇರುತ್ತದೆ. ಕಾಠ್ಯಾವಾಡ, ರೇವಾಕಾಂಠಾ, ಮಹೀಕಾಂಠಾ, ಪಾಲನಪೂರ ಈ ಏಜನ್ಸಿಗಳೊಳಗಿನ ಜಾಹಗೀರದಾರರ ಕಡೆಯಿಂದ ಕಪ್ಪವನ್ನು ಇಂಗ್ಲಿಷ ಸರಕಾರದವರು ವಸೂಲು ಮಾಡಿ ಗಾಯಕವಾಡನಿಗೆ ಕೊಡುತ್ತಾರೆ.

### ೬. ಖಂಬಾಯತ ಸಂಸ್ಥಾನ.

ಈ ಸಂಸ್ಥಾನವು ಅಹಮದಾಬಾದ ಜಿಲ್ಹೆಯ ಪಶ್ಚಿಮದಲ್ಲಿ ಮಹೀನದಿಯ ಉತ್ತರಕ್ಕೆ ಇರುತ್ತದೆ. ಇಲ್ಲಿಯ ಸಂಸ್ಥಾನಿಕನು ಮೊಗಲರ ಮನೆತನದವನು, ಅವನಿಗೆ ನವಾಬನೆನ್ನುವರು.

ಈ ಸಂಸ್ಥಾನವು ಖೇಡಾ ಜಿಲ್ಹೆಯ ಕಲೆಕ್ಟರನ ಕೈಕೆಳಗೆ ಇರುತ್ತದೆ. ಮುಖ್ಯ ಪಟ್ಟಣ ಖಂಬಾಯತವು, ಮಹೀನದಿಯ ಮುಖದ ಹತ್ತರ ಅದೆ. ಈ ಊರಲ್ಲಿ ೩೩,೦೦೬ ಜನರಿರುತ್ತಾರೆ; ಅವರಲ್ಲಿ ಸುಮಾರು ಅರ್ಧ ಜನರು ಮುಸಲಮಾನರುಂಟು.

ಹುಟ್ಟುವಳಿ.—ಈ ಸಂಸ್ಥಾನದಲ್ಲಿ ನೂಲಿನ ಬಟ್ಟೆಗಳೂ ಮೇಲಾದ ಜಮಖಾನೆಗಳೂ ಹುಟ್ಟುತ್ತವೆ. ಎಲ್ಲ ವಿಧದ ಧಾನ್ಯಗಳೂ, ಎಳ್ಳು, ಹತ್ತಿ, ಅಫೂ, ಇವೇ ಮುಖ್ಯ ಹುಟ್ಟುವಳಿಗಳು. ಖಂಬಾಯತದ ಬಂದರವು ಮುರಿಯುತ್ತ ನಡೆದದರಿಂದ ಅಲ್ಲಿಯ ವ್ಯಾಪಾರವು ದಿನದಿನಕ್ಕೆ ಕುಂದುತ್ತ ನಡೆದದೆ.

## ೭. ಪಂಚಮಹಾಲ ಏಜನ್ಸೀ.

ಪಂಚಮಹಾಲದ ಆಗ್ನೇಯಕ್ಕಿರುವ ನಾರೂಕೋಟ ಎಂಬ ಚಿಕ್ಕ ಸಂಸ್ಥಾನವು ಈ ಏಜನ್ಸಿಗೆ ಸೇರಿರುತ್ತದೆ. ಈ ಸಂಸ್ಥಾನದ ಸೀಮೆಯು ರೋಗಕರವಾದದ್ದು. ಇದರಲ್ಲಿ ಕೋಳೀ ಎಂಬ ಜಾತಿಯ ಜನರೂ ಭಿಲ್ಲರಂಥ ಕಾಡು ಜನರೂ ( ಅವರಿಗೆ ನಾಯಿಕರಾ ಎಂಬ ಹೆಸರುಂಟು ) ವಾಸಿಸುತ್ತಾರೆ. ಅರಸನಾದರೂ ಕೋಳೀ ಜಾತಿಯವನೇ. ಇವನು ಪಂಚಮಹಾಲದ ಮುಖ್ಯಾಧಿಕಾರಿಯ ಕೈಕೆಳಗೆ ಇರುತ್ತಾನೆ. ಈ ಪ್ರಾಂತದಲ್ಲಿ ಸ್ವಲ್ಪ ಧಾನ್ಯ ಹುಟ್ಟುತ್ತದೆ. ಆದರೆ ವ್ಯಾಪಾರದ ಮುಖ್ಯ ಜಿನಸು ತೊಲೆಗಳು.

## ೮. ಸುರತ ಏಜನ್ಸೀ.

ಇದರಲ್ಲಿ ಸಚೀನ, ವಾಸದಾ, ಧರಮಪುರ, ಎಂಬ ಸಂಸ್ಥಾನಗಳುಂಟು. ಅವುಗಳ ವ್ಯವಸ್ಥೆಯನ್ನು ಸುರತದ ಕಲೆಕ್ಟರನು ನೋಡುತ್ತಾನೆ. ಅವನಿಗೆ ಈ ಸಂಬಂಧದಿಂದ ಗವರ್ನರನ ಎಜಂಟನೆನ್ನುವರು.

ಸಚೀನ.—ಇದರಲ್ಲಿ ೧೭ ಗ್ರಾಮಗಳುಂಟು. ಅವು ಸುರತ ಜಿಲ್ಹೆಯ ಚೌರ್ಯಾಯಿಸಿ ಎಂಬ ತಾಲೂಕಿನಲ್ಲಿ ಕೂಡಿರುತ್ತವೆ. ಅವುಗಳಲ್ಲೆಲ್ಲ ಕೂಡಿ ೧೫,೭೨೧ ಜನರು ವಾಸಿಸುತ್ತಾರೆ. ಇಲ್ಲಿಯ ಸಂಸ್ಥಾನಿಕನಿಗೆ ನವಾಬನೆನ್ನುವರು.

ವಾಸದಾ.—ಇದು ಸುರತ ಜಿಲ್ಹೆಯ ಪೂರ್ವಕ್ಕೆ ಇರುತ್ತದೆ. ಜನಸಂಖ್ಯೆ ೩೪,೧೨೨, ಅರಸು ರಜಪೂತ ಜಾತಿಯವನು.

ಧರಮಪುರ.—ಇದು ಸುರತದ ಪೂರ್ವದಲ್ಲಿ ವಾಸದಾ ಸಂಸ್ಥಾನದ ದಕ್ಷಿಣಕ್ಕಿರುತ್ತದೆ. ಜನಸಂಖ್ಯೆ ೧,೦೧,೨೮೯, ಅರಸು ರಜಪೂತನು. ಅವನು ಧರಮಪುರದಲ್ಲಿ ಇರುತ್ತಾನೆ.

ಭೂಮಿ ಮತ್ತು ಹುಟ್ಟುವಳಿ—ವಾಸದಾ ಧರಮಪುರ ಇವೆರಡು ಸಂಸ್ಥಾನಗಳಲ್ಲಿ ಗುಡ್ಡಗಳು ಬಹಳ. ಅಡವಿಯೇ ಹೆಚ್ಚು; ಸಿಸುವಿನ ತೊಲೆಗಳೂ ಬೇರೆ ತೊಲೆಗಳೂ ಬಹಳ

ಹುಟ್ಟುತ್ತವೆ. ಅಕ್ಕಿ, ನಾಗಲಿ, ಬೇಳೆ, ಜೋಳ ಮುಂತಾದ ಧಾನ್ಯಗಳೂ, ಕಬ್ಬೂ ತಕ್ಕಮಟ್ಟಿಗೆ ಬೆಳೆಯುತ್ತವೆ. ಇಲ್ಲಿಯ ನಿವಾಸಿಗಳು ಮಾಡುವ ಮುಖ್ಯ ಜೀನಸುಗಳು ಮಾಳಿಗೆಯ ಹಂಚು, ಸುಣ್ಣ, ಇಟ್ಟಂಗಿ, ಮಣ್ಣಿನ ಪಾತ್ರೆ, ಚಾಪೆ ಮುಂತಾದವುಗಳು.

---

## ೬ ನೇ ಭಾಗ.

## ಕೊಂಕಣ.

ಸಹ್ಯಾದ್ರಿಗೂ ಸಮುದ್ರಕ್ಕೂ ನಡುವೆ ಇರುವ ಇಕ್ಕಟ್ಟಾದ ಪ್ರದೇಶಕ್ಕೆ ಕೊಂಕಣವೆನ್ನುವರು. ಈ ಪ್ರದೇಶದಲ್ಲಿ ಮೇಲಾದ ಬತ್ತದ ಗದ್ದೆಗಳೂ ತೆಂಗಿನ ಬನಗಳೂ ಉಂಟು. ನಡುನಡುವೆ ಗುಡ್ಡಗಳು ತಲೆದೋರುತ್ತವೆ. ಆದರೆ ತಗ್ಗು ದಿನ್ನೆಗಳೂ ಗುಡ್ಡಗಳೂ ಬಹಳ. ತಗ್ಗಾದ ಭೂಮಿಯಲ್ಲಿ ತೇವು ಹೆಚ್ಚಿಗೆ ಇರುವ ಕಾರಣ ಅಲ್ಲಿ ಗಿಡಗಳು ಬಹಳ ಬೆಳೆಯುತ್ತವೆ; ತೇಗಿನ ಸಣ್ಣ ಮರಗಳಾದರೂ ಬಹಳ. ಸುರತದಿಂದ ಗೋವೆಯ ವರೆಗೆ ಆರು ಭಾಗಗಳುಂಟು; ಅವು-ಠಾಣೆ, ಜಹ್ವಾರ, ಕುಲಾಬಾ, ಜಂಜೇರಾ, ರತ್ನಾಗಿರಿ, ಸಾವಂತವಾಡಿ.

೧. ಠಾಣೆ ಜಿಲ್ಹೆ—ಸುರತ ಜಿಲ್ಹೆ, ಪೋರ್ತುಗೀಜರ ದಮಣ ಪ್ರಾಂತ, ಇವುಗಳ ದಕ್ಷಿಣಕ್ಕೆ ಈ ಜಿಲ್ಹೆಯುಂಟು. ಇದರಲ್ಲಿ ೯ ತಾಲೂಕುಗಳು ಉಂಟು; ಅವು—ಡಹಾಣೂ, ಮಾಹೀಮ, ವಸಯಿ, ಸಾಷ್ಟಿ, ವಾಡೆ, ಭಿವಡಿ, ಕಲ್ಯಾಣ, ಶಹಾಪೂರ, ಮುರಬಾಡ; ಇವಲ್ಲದೆ ಮೊಖಾಡೆ, ಉಂಬರಗಾವ ಎಂಬ ಎರಡು ಮಹಾಲುಗಳುಂಟು.

ಭೂಮಿ—ಪೂರ್ವಕ್ಕೂ ಈಶಾನ್ಯಕ್ಕೂ ಇರುವ ಭೂಮಿ ಎತ್ತರವಾದದ್ದು. ಅದರಲ್ಲಿ ಸಾಗುವಳಿ ಬಹು ಸ್ವಲ್ಪ ನಡೆಯುತ್ತದೆ. ಸಮುದ್ರದಂಡೆಯು ಭೂಮಿ ತಗ್ಗಾದದ್ದು. ಸಮುದ್ರದ ನೀರು ಬಾರದಿದ್ದಲ್ಲಿ ಬೆಳೆಯು ನೆಟ್ಟಗೆ ಬರುತ್ತದೆ. ಈ ಜಿಲ್ಹೆಯಲ್ಲಿ ಹೇಳತಕ್ಕಂಥ ಹೊಳೆಗಳಿಲ್ಲ.

ಈ ಜಿಲ್ಹೆಯಲ್ಲಿ ಸಮುದ್ರದ ದೊಡ್ಡ ದೊಡ್ಡ ಬತ್ತು ಗಳು ಬಹಳ ಉಂಟು. ವಸಯೀ ಮತ್ತು ದಾತಿವರೆ ಎಂಬಲ್ಲಿಯ ಬತ್ತುಗಳಲ್ಲಿ ಹಡಗುಗಳಿಂದ ಕೆಲವು ವ್ಯಾಪಾರ ನಡೆಯುತ್ತದೆ.

ಸಮುದ್ರದ ದಂಡೆಯ ಗ್ರಾಮಗಳಲ್ಲಿ ಮೀನಬಲೆಗಾರರು ಬಹಳ.

ಮುಖ್ಯ ಗ್ರಾಮ ಠಾಣೆ (ಜನಸಂಖ್ಯೆ ೧೪,೪೫೬) ಎಂಬ ಪಟ್ಟಣವು ಸಾಷ್ಟಿ ನಡುಗಡ್ಡೆಯಲ್ಲಿ ಇರುತ್ತದೆ. ವಾಂದ್ರೆ (ಜನಸಂಖ್ಯೆ ೧೪,೯೮೭), ಕಲ್ಯಾಣ (ಜನಸಂಖ್ಯೆ ೧೨,೯೧೦) ಭಿವಡಿ (ಜನಸಂಖ್ಯೆ ೧೩,೮೧೭), ವಸಯಿ (ಜನಸಂಖ್ಯೆ ೧೦,೩೨೭), ಇವು ತಕ್ಕಮಟ್ಟಿಗೆ ದೊಡ್ಡ ಗ್ರಾಮಗಳು. ಕಲ್ಯಾಣದಲ್ಲಿ ರೇಲ್ವೇ ಕಂಪನಿಯವರ ದೊಡ್ಡ ಕಾರಖಾನೆ ಗಳುಂಟು. ವಾಂದ್ರೆ ಎಂಬಲ್ಲಿ ಮುಂಬಯಿಗೂ ಸಾಷ್ಟಿಗೂ ಹೋಗಲಿಕ್ಕೆ ಎರಡು ಪೂಲುಗಳು ಇರುತ್ತವೆ. ಆಗಾಶೀ (ಜನಸಂಖ್ಯೆ ೬,೮೨೩) ಎಂಬಲ್ಲಿ ಒಣಗಿದ ಬಾಳೇಹಣ್ಣು (ಸುಕೆಕೇಳೆ) ಆಗುತ್ತವೆ. ಇವು ಬೇರೆ ಎಲ್ಲಿಯೂ ದೊರೆ ಯುವದಿಲ್ಲ. ವಸಯಿಯಲ್ಲಿ ನೆಲಕೋಟೆಯುಂಟು. ಅದು ಮೊದಲು ಪೋರ್ತುಗೀಜರ ವಶದಲ್ಲಿತ್ತು. ಇಲ್ಲಿ ಸಕ್ಕರೆ ಮಾಡುವ ಕಾರಖಾನೆಗಳು ಇರುತ್ತವೆ. ಮಾಹಿಮ, (ಜನ ಸಂಖ್ಯೆ ೭,೧೨೨) ಒಂದು ದೊಡ್ಡ ಗ್ರಾಮವು.

೨. ಜವ್ಹಾರ ಸಂಸ್ಥಾನ—ಇದರ ಸುತ್ತು ಮುತ್ತು ಠಾಣೆ ಜಿಲ್ಹೆಯುಂಟು. ಇದರಲ್ಲಿ ಮೂರು ಮಹಾಲುಗಳಿವೆ.

ಭೂಮಿ—ಗುಡ್ಡಗಳೂ ಅಡವಿಯೂ ವಿಶೇಷ, ಆದರೂ ಬತ್ತ, ವರಿಯ, ನಾಗಲಿ, ಮುಂತಾದ ಧಾನ್ಯಗಳು ಬೆಳೆಯು ತ್ತವೆ. ಅಡವಿಯೊಳಗಿನ ಗಿಡಗಳಿಂದಲೂ ಬಳಿತಾಗಿ ಆದಾಯ ವುಂಟು. ಈ ಸಂಸ್ಥಾನದ ಅರಸು ಕೋಳೀ ಜಾತಿಯವನು. ಇದು ಠಾಣೆಯ ಕಲೆಕ್ಟರನ ಕೈಕೆಳಗಿರುತ್ತದೆ.

೩. ಕುಲಾಬಾ ಜಿಲ್ಹೆ—ಈ ಜಿಲ್ಹೆಯು ಠಾಣೆ ಮುಂಬ ಯಿಗಳ ದಕ್ಷಿಣಕ್ಕಿರುತ್ತದೆ. ಇದರಲ್ಲಿ ಗುಡ್ಡಗಳು ಬಹಳ,

ಕೆಲವು ಎತ್ತರವಾದ ಗುಡ್ಡಗಳು ನೆಟ್ಟಗೆ ಪಶ್ಚಿಮಕ್ಕೆ ಹೋಗಿರುತ್ತವೆ. ಇಲ್ಲಿ ಕೆಲವು ಶಿಖರಗಳಿರುತ್ತವೆ. ಇದರಲ್ಲಿ ೭ ತಾಲೂಕುಗಳುಂಟು. ಅವು—ಅಲಿಬಾಗ, ಪನವೇಲ, ಪೇಣ, ರೋಹೆ, ಮಹಾಡ, ಮಾಣಗಾವ, ಕರ್ಜತ; ಇವಲ್ಲದೆ ಉರಣ, ನಾಗೋಟಣೆ ಎಂಬ ಮಹಾಲುಗಳಿರುತ್ತವೆ.

ಈ ಜಿಲ್ಹೆಯ ಉತ್ತರದಲ್ಲಿ ನಾಗೋಟಣದ ಖತ್ರು, ಪಶ್ಚಿಮದಲ್ಲಿ ರೋಹೆಯ ಖತ್ರು, ದಕ್ಷಿಣದಲ್ಲಿ ಬಾಣಕೋಟದ ಖತ್ರು ಇರುತ್ತವೆ. ಇವುಗಳಲ್ಲಿ ಸಮುದ್ರದ ಭರತದ ನೀರು ಬಹಳ ದೂರದ ವರೆಗೆ ಹೋಗುತ್ತದೆ; ಅದರಿಂದ ಇವುಗಳಲ್ಲಿ ಹಡಗಗಳಿಂದ ವ್ಯಾಪಾರವು ಬಹಳ ಸಾಗುತ್ತದೆ.

ಈ ಜಿಲ್ಹೆಯ ನಿವಾಸಿಗಳ ಮುಖ್ಯ ಉದ್ಯೋಗಗಳು ಬತ್ತ ಬೆಳೆಸುವದು, ಮೀನ ಹಿಡಿಯುವದು, ಉಪ್ಪು ಮಾಡುವದು ಇತ್ಯಾದಿ. ರೇಶಿಮೆಯ ಮಗ್ಗಗಳನ್ನು ಪೋರ್ತುಗೀಜರು ತಂದರೆಂದು ಹೇಳುತ್ತಾರೆ. ರೇವದಂಡದಲ್ಲಿ ಅದರ ಕಾರಖಾನೆಯುಂಟು. ಸಮುದ್ರದಂಡೆಯಲ್ಲಿ ಅಡಿಕೆ ತೆಂಗುಗಳ ದೊಡ್ಡ ದೊಡ್ಡ ಬನಗಳುಂಟು.

ಅಲಿಬಾಗವು (ಜನಸಂಖ್ಯೆ ೬,೨೭೬) ಈ ಜಿಲ್ಹೆಯ ಮುಖ್ಯ ಪಟ್ಟಣವು. ಪನವೇಲ ( ಜನಸಂಖ್ಯೆ ೧೦,೩೩೧ ) ಉರಣ (ಜನಸಂಖ್ಯೆ ೧೦,೧೪೯) ಇವು ತಕ್ಕಮಟ್ಟಿಗೆ ದೊಡ್ಡ ಪಟ್ಟಣಗಳು. ಮಹಾಡ ( ಜನಸಂಖ್ಯೆ ೭,೮೯೪ ), ಪೇಣ ( ಜನಸಂಖ್ಯೆ ೮,೦೮೦ ), ಇವೆರಡು ಸ್ಥಳಗಳಲ್ಲಿ ಬತ್ತದ ವ್ಯಾಪಾರ ಬಹಳ ಸಾಗುತ್ತದೆ. ರೇವದಂಡಾ ( ಜನಸಂಖ್ಯೆ ೬,೯೦೮ ) ಚೌಲ ( ಜನಸಂಖ್ಯೆ ೫,೩೫೫ ) ರೋಹೆ ಅಷ್ಟಮಿ ( ಜನಸಂಖ್ಯೆ ೪,೮೯೪ ) ಇವು ದೊಡ್ಡ ಗ್ರಾಮಗಳುಂಟು.

೪. ಜಂಜಿರಾ ಸಂಸ್ಥಾನ:—ಇದು ಮುಂಬಯಿಯಿಂದ ರತ್ನಾಗಿರಿಗೆ ಹೋಗುವ ಮಾರ್ಗದ ಸರಾಸರಿ ಮಧ್ಯಭಾಗದಲ್ಲಿ ಸಮುದ್ರ ದಂಡೆಗೆ ಇರುತ್ತದೆ. ಈ ಸಂಸ್ಥಾನಕ್ಕೂ ರತ್ನಾಗಿರಿಗೂ ನಡುವೆ ಬಾಣಕೋಟದ ಖತ್ರು ಇರುತ್ತದೆ.

ಈ ಸಂಸ್ಥಾನದ ಅರಸು ಸಿದ್ದೀ ಜಾತಿಯವನು, ಅಂದರೆ ಹಬಸೀ ದೇಶದವನು; ಅವನಿಗೆ ನವಾಬನೆನ್ನುವರು; ಅವನು ಜಂಜೀರಾ ಕೋಟೆಯಲ್ಲಿ ಇರುತ್ತಾನೆ. ಅಲ್ಲಿ ಒಬ್ಬ ಅಸಿಸ್ಟಂಟ ಪೊಲಿಟಿಕಲ್ ಏಜಂಟನಿರುತ್ತಾನೆ; ಇವನು ಕುಲಾಬಾದ ಕಲೆಕ್ಟರನ ಹುಕುಮಿನಂತೆ ಕೆಲಸ ನಡಿಸುತ್ತಾನೆ. ಕಾಠ್ಯಾವಾಡದೊಳಗಿನ ಜಾಫರಾಬಾದವೆಂಬ ಗ್ರಾಮವು ಈ ನವಾಬನ ರಾಜ್ಯಕ್ಕೆ ಸೇರಿರುತ್ತದೆ.

ಈ ಸಂಸ್ಥಾನದಲ್ಲಿ ಸೀರೆಗಳಾಗುತ್ತವೆ. ಬತ್ತ, ನಾಗಲಿ, ಉಪ್ಪು ಹೇರಳವಾಗಿ ಹುಟ್ಟುತ್ತವೆ.

೫. ರತ್ನಾಗಿರಿ ಜಿಲ್ಹೆ—ಇದು ಕುಲಾಬಾ ಜಿಲ್ಹೆ ಜಂಜೀರಾ ಸಂಸ್ಥಾನಗಳ ದಕ್ಷಿಣಕ್ಕಿರುತ್ತದೆ. ಇದರಲ್ಲಿ ೯ ತಾಲೂಕುಗಳು—ದಾಪೋಲಿ, ಖೇಡ, ಚಿಪಳೂಣ, ಸಂಗಮೇಶ್ವರ, ರತ್ನಾಗಿರಿ, ರಾಜಾಪೂರ, ದೇವಗಡ, ಮಾಲವಣ, ವೆಂಗುರ್ಲೆ; ಮತ್ತು ೨ ಪೇಠೆಗಳು—ಮಂಡಣಗಡ, ಗುಹಾಗರ ಎಂಬವು ಉಂಟು.

ಭೂಮಿ—ತಗ್ಗುಪ್ರದೇಶದಲ್ಲಿ ಮೇಲಾದ ಬತ್ತದ ಗದ್ದೆಗಳು ಕೆಲವುಂಟು; ಆದರೆ ಗರಿಸಿನ ನೆಲವೇ ಹೆಚ್ಚು; ಗುಡ್ಡಗಳು ಬಹಳ; ಬತ್ತುಗಳಿಂದಲೂ ಹೊಳೆಗಳಿಂದಲೂ ಸಮುದ್ರ ದಂಡೆಯು ಛಿನ್ನಭಿನ್ನವಾಗಿದೆ.

ಇಲ್ಲಿಯ ನಿವಾಸಿಗಳಲ್ಲಿ ಕೆಲವರು ಒಕ್ಕಲತನ ನಡಿಸುವರು, ಕೆಲವರು ಮೀನ ಹಿಡಿಯುವರು, ಕೆಲವರು ಸುಣ್ಣ ಮಾಡುವರು.

ಈ ಜಿಲ್ಹೆಯ ಮುಖ್ಯ ಪಟ್ಟಣವಾದ ರತ್ನಾಗಿರಿಯು (ಜನಸಂಖ್ಯೆ ೧೨,೬೧೬), ತಕ್ಕ ಮಟ್ಟಿಗೆ ಪ್ರಸಿದ್ಧವಾದ ಬಂದರವಿರುತ್ತದೆ. ಮಾಲವಣ (ಜನಸಂಖ್ಯೆ ೧೫,೫೬೫) ಚಿಪಳೂಣ (ಜನಸಂಖ್ಯೆ ೧೨,೦೬೫), ವೆಂಗುರ್ಲೆ (ಜನಸಂಖ್ಯೆ ೮,೯೪೭), ರಾಜಾಪುರ (ಜನಸಂಖ್ಯೆ ೭,೪೪೮), ಇವು ಹೆಸರಾದ ಬಂದರಗಳು. ಇವುಗಳಲ್ಲಿ ವ್ಯಾಪಾರವು ಬಹಳ ನಡೆಯುತ್ತದೆ.

ಹರ್ಣಯಿಯಲ್ಲಿ ಕೋಟೆಯುಂಟು, ಇದಾದರೂ ಬಂದರದ ಸ್ಥಳವೇ. ಅಚರೆ, ಮಸೂರೆ, ದೇವರೂಖ, ಸಂಗಮೇಶ್ವರ, ಮಾಲಗುಂಡ, ಗುಹಾಗರ, ಖೇಡ, ಮುರೂಡ, ಬಾಣಕೋಟ ಇವು ದೊಡ್ಡ ಗ್ರಾಮಗಳು.

೬. ಸಾವಂತವಾಡೀ ಸಂಸ್ಥಾನ—ಇದು ಕೊಂಕಣದ ತೀರ ದಕ್ಷಿಣಕ್ಕಿರುತ್ತದೆ. ಇಲ್ಲಿಯ ಸಂಸ್ಥಾನಿಕನು, ಭೋಸಲೆಯು ವರ ಮನೆತನದೊಳಗಿನೊಬ್ಬ ಮಹಾರಾಷ್ಟ್ರ ಸರದಾರನು. ಪೊಲಿಟಿಕಲ್ ಸುಪರಿಂಟೆಂಡೆಂಟನು ಸಾವಂತವಾಡಿಯಲ್ಲಿ ಇರುತ್ತಾನೆ. ಈ ಗ್ರಾಮದಲ್ಲಿ ಮೇಲಾದ ಬಣ್ಣದ ಸಾಮಾನು ಗಳು ಹುಟ್ಟುತ್ತವೆ. ಬತ್ತ, ತೆಂಗು, ರಾಗಿ, ವರಿಯು, ಅಳ್ಳೀಕಾ ಯಿಗಳು ಬಹಳ ಬೆಳೆಯುತ್ತವೆ.

---

## ೭ನೇ ಭಾಗ.

## ದೇಶ.

ಸಹ್ಯಾದ್ರಿಯ ಪೂರ್ವಕ್ಕಿರುವ ಪ್ರದೇಶಕ್ಕೆ ದೇಶವೆನ್ನು ವರು. ಈ ಪ್ರದೇಶವು ಸಮನೆಲದ್ದಿದ್ದು ಇದರಲ್ಲಿ ದೊಡ್ಡ ದೊಡ್ಡ ಹೊಳೆಗಳು ಹರಿಯುತ್ತವೆ. ಆ ಹೊಳೆಗಳ ದಂಡೆಯು ಭೂಮಿ ಬೆಳೆಯುಳ್ಳದ್ದು. ಇದರ ಹವೆಯಲ್ಲಿ ತಂಪು ಕಡಿಮೆ, ಮಳೆಯ ನಿಯಮವಿಲ್ಲ. ಒಳ್ಳೇ ಬೆಳೆ ಬಂದ ವರ್ಷವಾದರೂ ಮಳೆಗಾಲದ ಹೊರ್ತು ಅಡವಿಯೊಳಗೆ ಹಸರು ಕಾಣುವದು ಅಪರೂಪ.

ಖಾನದೇಶದ ಎರಡು ಜಿಲ್ಹೆಗಳು—ಪೂರ್ವದಲ್ಲಿ ಇದು ಒಂದೇ ದೊಡ್ಡ ಜಿಲ್ಹೆ ಇತ್ತು; ಆದರೆ ಒಳಗಡೆಯಲ್ಲಿ (೧೯೦೬) ಇದರಲ್ಲಿ ಎರಡು ಜಿಲ್ಹೆಗಳನ್ನು ಮಾಡಿರುವರು. ಇವುಗಳ ಉತ್ತರಕ್ಕೆ ಸಾತಪುಡಾ ಪರ್ವತವೂ, ದಕ್ಷಿಣಕ್ಕೆ ಸಾತಮಾಳಾ ಅಥವಾ ಅಜಂಟಾ ಬೆಟ್ಟಗಳೂ ಉಂಟು.

ಭೂಮಿ—ಈ ಜಿಲ್ಹೆಯ ಪೂರ್ವ ಮಧ್ಯಭಾಗಗಳಲ್ಲಿ ಬಹುತರವಾಗಿ ಸಮನೆಲ ಉಂಟು. ಕೆಲಕೆಲವು ಕಡೆಯಲ್ಲಿ

ಫಲಫಲಿತವಾದ ಹೊಲಗಳು ಇರುತ್ತಿದ್ದಾಗ್ಯೂ, ಯಾವತ್ತು ಪ್ರದೇಶವು ಹಾಳು ಇದ್ದಂತೆ ಕಾಣುತ್ತದೆ. ಉತ್ತರ ಪಶ್ಚಿಮ ಪ್ರದೇಶಗಳು ಎತ್ತರವಾಗಿರುತ್ತವೆ; ಅಲ್ಲಿ ದಟ್ಟಾದ ಅಡವಿ ಬಹಳ; ಆ ಅಡವಿಯಲ್ಲಿ ಭಿಲ್ಲರು ವಾಸಿಸುತ್ತಾರೆ.

ಪೂರ್ವ ಖಾನದೇಶ ಜಿಲ್ಹೆಯಲ್ಲಿ ೧೦ ತಾಲೂಕುಗಳಿವೆ. ಅವು—ಅಮಳನೇರ (ಮುಖ್ಯ ಪಟ್ಟಣ), ಎರಂಡೋಲ, ಚೋಪಡೆ, ಪಾಚೋರಾ, ಚಾಳೀಸಗಾವ, ಜಾಮನೇರ, ಜಳಗಾವ, ಭುಸಾವಳ, ಯಾವಲ, ರಾವೇರ. ಇವಲ್ಲದೆ ಪರೋಳೆ, ಭಡಗಾವ, ಎದಲಾಬಾದ ಎಂಬ ೩ ಪೇಠೆಗಳುಂಟು.

ಪಶ್ಚಿಮ ಖಾನದೇಶದಲ್ಲಿ ೭ ತಾಲೂಕುಗಳಿರುತ್ತವೆ. ಅವು— ಧುಳೆ (ಮುಖ್ಯ ಪಟ್ಟಣ), ಶಿಂಥಕೇಡ, ಶಿರಪೂರ, ಪಿಂಪಳನೇರ, ನಂದೂರಬಾರ, ತಳೋದೆ, ಶಹಾದೆ; ಇವಲ್ಲದೆ ನವಾಪುರವೆಂಬದೊಂದು ಪೇಠೆಯುಂಟು.

ತಾಪಿ ಅದರ ಶಾಖೆಯಾದ ಗಿರಣಾ, ಇವೆರಡು ಮುಖ್ಯ ಹೊಳೆಗಳು. ಈ ಹೊಳೆಗಳ ದಂಡೆಯ ಭೂಮಿಯು ಬಹುತರ ಬೆಳೆಯುಳ್ಳದ್ದು; ಅದರಲ್ಲಿ ಒಕ್ಕಲತನವು ಚನ್ನಾಗಿ ಸಾಗುತ್ತದೆ. ಒಕ್ಕಲತನವೇ ಜನರ ಮುಖ್ಯ ಉದ್ಯೋಗ; ಬಟ್ಟೆಗಳನ್ನು ಕೆಲಕೆಲವು ಕಡೆಯಲ್ಲಿ ನೇಯುತ್ತಾರೆ.

ಧುಳೆ (ಜನಸಂಖ್ಯೆ ೧೮,೪೪೯) ಪಶ್ಚಿಮ ಜಿಲ್ಹೆಯ ಮುಖ್ಯ ಸ್ಥಳವು, ಪಾರೋಳೆ (ಜನಸಂಖ್ಯೆ ೧೨,೬೫೪), ಚೋಪಡೆ (ಜನಸಂಖ್ಯೆ ೧೩,೯೩೨), ಧರಣಗಾವ (ಜನಸಂಖ್ಯೆ ೧೩,೦೮೧), ಎರಂಡೋಲ (ಜನಸಂಖ್ಯೆ ೧೧,೫೦೧), ನಸಿರಾಬಾದ (ಜನಸಂಖ್ಯೆ ೧೦,೨೪೩), ಜಳಗಾವ (ಜನಸಂಖ್ಯೆ ೯,೯೧೮), ಫೈಜಪೂರ (ಜನಸಂಖ್ಯೆ ೯,೬೪೦), ಭುಸಾವಳ (ಜನಸಂಖ್ಯೆ ೯,೬೧೩), ಯಾವಲ (ಜನಸಂಖ್ಯೆ ೮,೮೮೦), ಸಾವದೆ (ಜನಸಂಖ್ಯೆ ೮,೬೪೭), ಇವು ತಕ್ಕಮಟ್ಟಿಗೆ ದೊಡ್ಡ ಪಟ್ಟಣಗಳುಂಟು. ಇವಲ್ಲದೆ ಅಮಳನೇರ ಪೂರ್ವ ಜಿಲ್ಹೆಯ ಮುಖ್ಯ

ಸ್ಥಳ, ಶಿರಪೂರ, ರಾವೇರ, ನಂದುರಬಾರ, ಭಡಗಾವ, ಶೆಂದುರ ಣೀ, ಶಹಾದೆ, ಜಾಮನೇರ, ಬೋದವಾಡ, ತಳೋದೆ,ಪ್ರಕಾಶೆ, ಗರಣಗಾಂವ ಎಂಬ ದೊಡ್ಡ ಗ್ರಾಮಗಳುಂಟು. ಭುಸಾವಳ ದಲ್ಲಿ ರೇಲ್ವೇ ಕಂಪನಿಯವರ ದೊಡ್ಡ ಕಾರಖಾನೆಗಳುಂಟು. ಇಲ್ಲಿಂದ ನಾಗಪುರಕ್ಕೆ ಲೋಹಮಾರ್ಗದೊಂದು ಶಾಖೆ ಹೋಗಿರುತ್ತದೆ.

೨. ಖಾನದೇಶ ಏಜನ್ಸೀ—ಈ ಭಾಗವು ಪಶ್ಚಿಮ ಖಾನದೇಶ ಜಿಲ್ಹೆಯ ಪಶ್ಚಿಮಕ್ಕಿರುತ್ತದೆ. ಇದರ ಮೇಲಧಿಕಾರಿಯು ಆ ಜಿಲ್ಹೆಯ ಕಲೆಕ್ಟರನೇ. ಇದರಲ್ಲಿ ೧ ಡಾಂಗನಾಡು ೨ ಮೇವಾಸೀಪ್ರಾಂತ ಎಂಬ ಎರಡು ಭಾಗಗಳುಂಟು.

೧. ಡಾಂಗನಾಡು,—ಇದು ಸಹ್ಯಾದ್ರಿಯ ಪಶ್ಚಿಮಕ್ಕಿರುತ್ತದೆ. ಈ ಸೀಮೆಯ ಒಡೆಯರು ೭ ಮಂದಿ ಭಿಲ್ಲ ಜಾತಿಯ ಸರದಾರರುಂಟು. ಇದರಲ್ಲಿ ಗುಡ್ಡಗಳು ಬಹಳ; ಅವುಗಳ ದರಿಗಳಲ್ಲಿ ನಿಬಿಡವಾದ ಅರಣ್ಯವುಂಟು. ಮುಖ್ಯ ಹುಟ್ಟುವ ಳಯು ಬಗೆ ಬಗೆಯ ಅಂಟುಗಳೂ, ತೇಗಿನ ತೊಲೆಗಳೂ. ಇಲ್ಲಿಯ ಜನರು ಆಡುವ ಭಾಷೆಯು ಮಹಾರಾಷ್ಟ್ರ, ಗುಜರಾಥಿ, ಹಿಂದುಸ್ಥಾನಿ ಈ ಮೂರು ಭಾಷೆಗಳಿಂದ ಹುಟ್ಟಿರುತ್ತದೆ.

೨. ಮೇವಾಸೀ ಪ್ರಾಂತ-ಇದು ಖಾನದೇಶದ ವಾಯುವ್ಯಕ್ಕೆ ನರ್ಮದೆ ತಾಪಿಗಳ ನಡುವೆ ಇರುತ್ತದೆ. ಇದರ ಒಡೆಯರು ೬ ಮಂದಿ ಸಂಸ್ಥಾನಿಕರುಂಟು. ಈ ಪ್ರದೇಶದಲ್ಲಿ ಡಾಂಗು ನಾಡಿಗಿಂತ ಹೆಚ್ಚಿಗೆ ಬೆಳೆಯುಳ್ಳ ಭೂಮಿಯುಂಟು. ಇಲ್ಲಿ ಸೆರೆ, ಜೇನತುಪ್ಪ, ಮೇಣ, ತೊಲೆಗಳು ಎಲ್ಲ ವಿಧದ ಧಾನ್ಯಗಳು ಮುಂತಾದವುಗಳು ಹುಟ್ಟುತ್ತವೆ. ನಿವಾಸಿಗಳು ಬಹುತರವಾಗಿ ಭಿಲ್ಲರು.

೩. ನಾಸಿಕ ಜಿಲ್ಹೆ—ಇದು ಖಾನದೇಶದ ದಕ್ಷಿಣಕ್ಕಿರುತ್ತದೆ. ಸಹ್ಯಾದ್ರಿಗೆ ಸಮೀಪವಾದ ಪಶ್ಚಿಮ ಭಾಗವು ತೀರ ಗುಡ್ಡ

ಗಾಡು. ಈ ಜಿಲ್ಹೆಯು ಭೂಮಿಯು ಮೇಲಾದದ್ದು, ಆದರೆ ಗಿಡಗಳು ಬಹಳ ಸ್ವಲ್ಪ. ಚಾಂದವಡದ ಗುಡ್ಡಗಳಿಂದ ಈ ಗುಡ್ಡಗಳಲ್ಲಿ ಎರಡು ಭಾಗಗಳಾಗಿವೆ. ಉತ್ತರ ಬಾಗದಲ್ಲಿ ಗಿರಣಾ ಎಂಬ ಹೊಳೆಯು, ದಕ್ಷಿಣ ಭಾಗದಲ್ಲಿ ಗೋದಾವರಿಯು ಹರಿಯುತ್ತದೆ. ಒಕ್ಕಲತನವೇ ಜನರ ಮುಖ್ಯ ಹೋರೆಯು; ಇದರಲ್ಲಿ ೧೩ ತಾಲೂಕುಗಳುಂಟು; ಅವು.—ಬಾಗಲಾನ, ಕೇಳವಣ, ಚಾಂದವಡ, ದಿಂಡೋರಿ, ಪೇಠ, ನಾಸಿಕ, ಇಗತಪುರೀ, ಸಿನ್ನರ, ನಿಫಾಡ, ಏವಲೆ, ನಾಂದಗಾವ, ಮಾಲೇಗಾಂವ.



ಈ ಜಿಲ್ಹೆಯು ಮುಖ್ಯ ಗ್ರಾಮವಾದ ನಾಸಿಕ ಪಟ್ಟಣದಲ್ಲಿ ೨೪,೧೦೧ ಜನರು ವಾಸಿಸುತ್ತಾರೆ; ಇದು ಗೋದಾವರೀ ತೀರದಲ್ಲುಂಟು. ಇಲ್ಲಿ ಹುಟ್ಟುವ ಹಿತ್ತಾಳಿಯ ಪಾತ್ರೆಗಳು ಬಹು ಪ್ರಸಿದ್ಧ; ಏವಲೆಯಲ್ಲಿ ( ಜನಸಂಖ್ಯೆ ೧೭,೦೮೮ ) ಮೇಲಾದ ಜರದ ಮತ್ತು ರೇಶಿಮೆಯ ವಸ್ತ್ರಗಳು ಹುಟ್ಟುತ್ತವೆ, ಮಾಲೇಗಾಂವದಲ್ಲಿ (ಜನಸಂಖ್ಯೆ ೧೪,೪೦೩) ದಂಡಿನಠಾಣ್ಯವದೆ,ಇದಕ್ಕೆ ಕೋಟೆಯುೂ ಉಂಟು. ಸಿನ್ನರ, ಇಗತಪುರೀ, ಚಾಂದವಡ, ಮನಮಾಡ, ವಿಂಚೂರ ಇವು ದೊಡ್ಡ ಗ್ರಾಮುಗಳು. ತ್ರ್ಯಂಬಕೇಶ್ವರದಲ್ಲಿ ಗೋದಾವರಿಯ ಉಗಮ ಉಂಟು; ಇದು ಹೆಸರಾದ ದೇವಸ್ಥಾನವು, ಕ್ಷೇತ್ರವೆನಿಸುತ್ತದೆ.

ನಾಸಿಕ ಏಜನ್ಸೀ ಅಥವಾ ಸುರಗಣ ತಾಲೂಕು.—ಇದು ಡಾಂಗುನಾಡಿನ ದಕ್ಷಿಣಕ್ಕಿರುತ್ತದೆ; ಇದರ ಮೇಲಧಿಕಾರಿಯು ನಾಸಿಕದ ಕಲೆಕ್ಟರನು. ಇದು ಒಬ್ಬ ಹಿಂದೂ ಸರದಾರನ ವಶದಲ್ಲುಂಟು. ಅವನಿಗೆ ದೇಶಮುಖನೆನ್ನುವರು. ಇದರಲ್ಲಿಯೂ ಡಾಂಗುನಾಡಿನಂತೆ ಗುಡ್ಡಗಳೂ ಅಡವಿಯೂ ಉಂಟು. ಆದರೆ ಇಲ್ಲಿಯ ಅಡವಿಯನ್ನು ಹೆಚ್ಚಾಗಿ ಕಡಿದಿದ್ದಾರೆ.

೪. ಅಹಮ್ಮದನಗರ ಜಿಲ್ಹೆ—ಇದು ನಾಸಿಕ ಜಿಲ್ಹೆಯ ದಕ್ಷಿಣಕ್ಕಿರುತ್ತದೆ.ಇದರ ಪಶ್ಚಿಮಭಾಗ ಗುಡ್ಡಗಳುಳ್ಳದ್ದು;

ಭೂಮಿಯು ಪಶ್ಚಿಮದಿಂದ ಪೂರ್ವಕ್ಕೆ ಇಳುಕಲಾಗಿದೆ. ಉತ್ತರಭಾಗದ ನೀರು ಗೋದಾವರಿಗೆ, ದಕ್ಷಿಣ ಭಾಗದ್ದು ಭೀಮೆಗೆ ಕೂಡುತ್ತದೆ. ಜನರು ಒಕ್ಕಲತನದಿಂದ ಜೀವಿಸುವರು. ನೇಕಾರರೂ ಬಹು ಜನರುಂಟು. ಈ ಜಿಲ್ಹೆಯಲ್ಲಿ ೧೧ ತಾಲೂಕುಗಳಿವೆ. ಅವು—ಅಕೋಲೆ, ಸಂಗಮನೇರ, ಕೋಪರಗಾವ, ರಾಹೂರಿ, ನೇವಾಸೆ, ಶೇವಗಾಂವ, ನಗರ, ಪಾರನೇರ, ಶ್ರೀಗೊಂದೆ, ಕರ್ಜತ, ಜಾಮಖೇಡ.

ಜಿಲ್ಹೆಯ ಮುಖ್ಯ ಪಟ್ಟಣವಾದ ಅಹಮ್ಮದನಗರವು (ಜನಸಂಖ್ಯೆ ೩೭,೪೯೨) ಸೀನಾ ಹೊಳೆಯ ಧಡದಲ್ಲಿ ಇರುತ್ತದೆ. ಇಲ್ಲಿ ಲಷ್ಕರೀ ಛಾವಣಿಯುಂಟು. ಇದು ಮೊದಲು ಮುಸಲಮಾನೀ ರಾಜ್ಯದ ರಾಜಧಾನಿ ಇತ್ತು. ಈ ಪಟ್ಟಣಕ್ಕೆ ಕೋಟೆಯುಂಟು. ಇಲ್ಲಿ ಮೇಲಾದ ಸೀರೆಗಳು ಹುಟ್ಟುತ್ತವೆ. ಸಂಗಮನೇರವು (ಜನಸಂಖ್ಯೆ ೮,೦೭೦) ಪ್ರವರಾನದಿಯ ಧಡದಲ್ಲಿರುತ್ತದೆ. ಪಾಥರ್ಡಿ, ಖರ್ಡೆ, ಸೋನಯೀ ಶ್ರೀಗೊಂದೆ ಭಿಂಗಾರ ಮುಂತಾದ ದೊಡ್ಡ ಗ್ರಾಮಗಳುಂಟು.

೫. ಪುಣೆ ಜಿಲ್ಹೆ.—ಇದು ಅಹಮ್ಮದನಗರದ ಜಿಲ್ಹೆಯ ದಕ್ಷಿಣಕ್ಕೂ ಪಶ್ಚಿಮಕ್ಕೂ ನೀರೆಯ ಉತ್ತರಕ್ಕೂ ಇರುತ್ತದೆ. ಇದರ ಪಶ್ಚಿಮ ಭಾಗದಲ್ಲಿ ಗುಡ್ಡಗಳು ಬಹಳ. ಭೂಮಿಯು ಪಶ್ಚಿಮದಿಂದ ಪೂರ್ವಕ್ಕೆ ಇಳಿಯುತ್ತದೆ. ಈ ಜಿಲ್ಹೆಯಲ್ಲಿ ಹಲವು ಹೊಳೆಗಳುಂಟು. ಅವು ಪೂರ್ವಕ್ಕೆ ಹರಿದು ಭೀಮೆಗೆ ಕೂಡುತ್ತವೆ. ಭೀಮೆಯು ಭೀಮಾಶಂಕರದಲ್ಲಿ ಹುಟ್ಟಿ, ಈ ಜಿಲ್ಹೆಯ ಪೂರ್ವಕ್ಕೆ ಹರಿಯುತ್ತದೆ. ಈ ಜಿಲ್ಹೆಯಲ್ಲಿ ೮ ತಾಲೂಕುಗಳುಂಟು. ಅವು—ಹವೇಲಿ (ಪುಣೆ) ಪುರಂದರ (ಸಾಸವಡ), ಭೀಮಥಡಿ, ಇಂದಾಪೂರ, ಜುನ್ನರ, ಖೇಡಾ, ಮಾವಳ, ಶಿರೂರ. ದೌಂಡ, ಬಾರಾಮತೀ, ಘೋಡೆ ಎಂಬ ಮೂರು ಪೇಠೆಗಳುಂಟು.

ಪುಣೆ ಪಟ್ಟಣವು ಮುಳಾ, ಮುಠಾ ಇವೆರಡು ಹೊಳೆಗಳ ಸಂಗಮದ ಹತ್ತರ ಇರುತ್ತದೆ. ಇದರ ಜನಸಂಖ್ಯೆ ೯೯,೭೨೨.

ಈ ಪಟ್ಟಣವು ಈ ಇಲಾಖೆಯಲ್ಲಿ ನಾಲ್ಕನೇ ದೊಡ್ಡ ಪಟ್ಟಣವಾಗಿದೆ. ಮೊದಲು ಪೇಶವೆಯರ ರಾಜಧಾನಿಯಿತ್ತು. ಇಲ್ಲಿ ಮೇಲಾದ ರೇಶಿಮೆಯ ವಸ್ತ್ರಗಳೂ ಜರದ ವಸ್ತ್ರಗಳೂ ಸೀರೆಗಳೂ ಹುಟ್ಟುತ್ತವೆ. ಈ ಪಟ್ಟಣದ ಹತ್ತರ ಗಣೇಶ ಖಿಂಡಿಯಲ್ಲಿ ಗವ್ಹರ್ನರನ ಬಂಗಲೆಯುಂಟು. ಖಡಕಿ, ಘೋರ್ಪಡಿ, ವಾನವಡಿ ಎಂಬ ನೆರೆ ಪ್ರದೇಶಗಳಲ್ಲಿ ದಂಡಿನ ಪಾಳ್ಯವುಂಟು; ಮತ್ತು ಅಲ್ಲಿಯ ಜನಸಂಖ್ಯೆ ೩೭,೩೮೧ ಅದೆ. ಜುನ್ನರದಲ್ಲಿ ( ಜನಸಂಖ್ಯೆ ೧೦,೩೭೩ ) ಸೀರೆಗಳೂ, ಕಾಗದಗಳೂ ಹುಟ್ಟುತ್ತವೆ. ಇಂದಾಪುರ, ತಳೇಗಾಂವ (ಧಮಢೇರೆ ಎಂಬವರದು), ಖೇಡ, ಸಾಸವಾಡ, ಓತೂರ, ಘೋಡನದೀ, ತಳೇಗಾಂವ ( ದಾಭಾಡೆ ಎಂಬವರದು ), ಬಾರಾಮತೀ, ಘೋಡೆ, ನಾರಾಯಣಗಾವ, ಮಂಚರ ಇವು ದೊಡ್ಡ ಗ್ರಾಮಗಳು.

ಪುಣೆಯಲ್ಲಿ ನೇಯುವ ಉದ್ಯೋಗವು ಬಹಳ ನಡೆಯುತ್ತದೆ. ವಸ್ತ್ರ ನೇಯುವದೂ ಒಕ್ಕಲತನವೂ ಜನರ ಮುಖ್ಯ ಹೋರೆಗಳು.

೬. ಭೋರ ಸಂಸ್ಥಾನ—ಇದು ಪಂತಸಚಿವ ಎಂಬ ಬ್ರಾಹ್ಮಣ ಜಾಹಗೀರದಾರನದಿರುತ್ತದೆ. ಅವನು ಮೊದಲು ಸಾತಾರೆಯ ಅರಸನ ಕೈಕೆಳಗಿದ್ದನು. ಈಗ ಇಂಗ್ಲಿಷ ಸರಕಾರದ ವಶದಲ್ಲಿರುತ್ತಾನೆ. ಪುಣೆ ಜಿಲ್ಹೆಯ ಕಲೆಕ್ಟರನು ಈ ಸಂಸ್ಥಾನದ ಎಜಂಟನು, ಈ ಸಂಸ್ಥಾನವು ಪುಣೆ ಜಿಲ್ಹೆಯ ನೈಋತ್ಯ ಮೂಲೆಯಲ್ಲಿ ಅದೆ. ಘಟ್ಟದ ಪಶ್ಚಿಮ ಕಡೆಯ ಇಳುಕಲಿನ ಕೆಲವು ಭಾಗಗಳಲ್ಲಿ (ಕೊಂಕಣದೊಳಗೆ) ಈ ಸಂಸ್ಥಾನದ ನಾಡುಗಳಿವೆ. ಇದು ಗುಡ್ಡಗಾಡು ಪ್ರದೇಶವು. ತಕ್ಕಮಟ್ಟಿಗೆ ಅಡವಿಗಳುಂಟು. ಅಕ್ಕಿ, ನಾಗಲಿ, ಸಾವಿ, ಎಳ್ಳು, ವರಿಯ ಮುಂತಾದ ಧಾನ್ಯಗಳು ಬೆಳೆಯುತ್ತವೆ.

೭. ಸಾತಾರೆ ಜಿಲ್ಹೆ—ಇದು ಪುಣೆ ಜಿಲ್ಹೆಯ ದಕ್ಷಿಣಕ್ಕಿರುತ್ತದೆ. ಇವೆರಡು ಜಿಲ್ಹೆಗಳ ನಡುವೆ ನೀರಾನದಿಯುಂಟು.

ಬಹುತರ ಎಲ್ಲ ಕಡೆಯಲ್ಲಿ ಗುಡ್ಡಗಳಿರುತ್ತವೆ. ಭೂಮಿಯು ಪೂರ್ವಕ್ಕೆ ಇಳಿಜಾರಾಗುತ್ತ ಹೋಗಿದೆ. ಇದರಲ್ಲಿ ೧೧ ತಾಲೂಕುಗಳಿವೆ; ಅವು – ಜಾವಲಿ, ಕರ್‍ಹಾಡ, ಕೋರೆಗಾವ, ಖಟಾವ, ಖಾನಾಪೂರ, ಮಾಣ, ಪಾಟಣ, ಸಾತಾರೆ, ತಾಸಗಾವ, ವಾಯಿ, ವಾಳವೆ, ಎಂಬವು. ಇವಲ್ಲದೆ ಸಾತಾರೆಯ ಹತ್ತರ ಮಹಾಬಳೇಶ್ವರದ ಎತ್ತರ ಪ್ರದೇಶದಲ್ಲಿ ಮಾಲಂಕಪೇಠ ಮತ್ತು ಖಂಡಾಳೆ ಎಂಬೆರಡು ಪೇಠೆಗಳುಂಟು.

ಕೃಷ್ಣೆಯೂ ಅದರ ಶಾಖೆಗಳಾದ ಕೊಯನಾ, ವೇಣ್ಯಾ, ವಾರಣಾ ಇವೇ ಮುಖ್ಯ ಹೊಳೆಗಳು. ಮಹಾಬಳೇಶ್ವರದಲ್ಲಿ ಕೃಷ್ಣೆಯ ಉಗಮವುಂಟು. ಈ ಜಿಲ್ಹೆಯ ಈಶಾನ್ಯ ಮೂಲೆಯಲ್ಲಿ ನೀರೆಯು ಭೀಮೆಗೆ ಕೂಡುತ್ತದೆ.

ಜನರು ಮುಖ್ಯವಾಗಿ ಒಕ್ಕಲತನದಿಂದಲೂ, ನೇಯುವ ಉದ್ಯೋಗದಿಂದಲೂ ಜೀವಿಸುವರು.

ಜಿಲ್ಹೆಯ ಮುಖ್ಯ ಪಟ್ಟಣವಾದ ಸಾತಾರೆಯಲ್ಲಿ (ಜನಸಂಖ್ಯೆ ೨೯,೦೨೮) ಮೊದಲು ಶಿವಾಜಿಯ ವಂಶದವರು ರಾಜ್ಯ ಮಾಡುತ್ತಿದ್ದರು; ಇಲ್ಲಿ ಒಂದು ದುರ್ಗ ಕೋಟೆಯುಂಟು. ವಾಯಿ (ಜನಸಂಖ್ಯೆ ೧೧,೬೭೬), ಕರ್‍ಹಾಡ (ಜನಸಂಖ್ಯೆ ೧೦,೭೦೮), ಇವೆರಡು ಕೃಷ್ಣೆಯ ದಡದಲ್ಲಿ ಪ್ರಸಿದ್ಧ ಪಟ್ಟಣಗಳು. ಇವಲ್ಲದೆ ತಾಸಗಾವ (ಜನಸಂಖ್ಯೆ ೧೦,೨೦೦) ಅಷ್ಟೆ (ಜನಸಂಖ್ಯೆ ೯,೫೪೮), ಇಸಲಾಮಪುರ (ಜನಸಂಖ್ಯೆ ೮,೯೪೯) ಎಂಬವು ತಕ್ಕಮಟ್ಟಿಗೆ ದೊಡ್ಡ ಪಟ್ಟಣಗಳು. ಇವಲ್ಲದೆ ರಹಿಮತಪುರ, ಮ್ಹಸವಾಡ, ಭಿಲೋಡಿ, ಪೇಠ, ನೇರ್ಲೆ, ಕೋಳೆ, ವಿಟೆ, ಪಾಟಣ ಮುಂತಾದ ದೊಡ್ಡ ಗ್ರಾಮಗಳುಂಟು.

೮. ಸಾತಾರೆ ಜಿಲ್ಹೆಗೆ ಸೇರಿದ ಜಾಹಗೀರಗಳು:—ಇವುಗಳಲ್ಲಿ ಔಂಧ, ಫಲಟಣ ಸಂಸ್ಥಾನಗಳು ಸೇರುತ್ತವೆ. ಇವು ಮೊದಲು ಸಾತಾರೆಯ ಅರಸನ ವಶದಲ್ಲಿದ್ದವು; ಆದರೆ ಈಗ ಬ್ರಿಟಿಶ್ ಸರಕಾರಕ್ಕೆ ಸೇರಿ, ಅಲ್ಲಿ ಸಾತಾರೆಯ ಕಲೆಕ್ಟರನೇ ಏಜಂಟನ ಅಧಿಕಾರ ನಡಿಸುತ್ತಾನೆ.

| | ಕ್ಷೇತ್ರಫಲ ಮೈ. | ಜನಸಂಖ್ಯೆ. |
|---|---|---|
| ಫಲಟಣ........................................ | ೩೯೭ | ೫೮,೪೦೨ |
| ಔಂಧ............................................ | ೪೪೭ | ೫೮,೯೧೬ |
| ಅಂತು | ೮೪೪ | ೧,೧೭,೩೧೮ |

ಔಂಧವು ಸಾತಾರೆ ಜಿಲ್ಹೆಯ ದಕ್ಷಿಣಕ್ಕೂ ಫಲಟಣವು ಅದರ ಉತ್ತರಕ್ಕೂ ಇರುತ್ತವೆ. ಸುತ್ತುಮುತ್ತಲಿರುವ ಇಂಗ್ಲೀಷ ಸರಕಾರದ ನಾಡಿನೊಳಗಿನ ಹುಟ್ಟುವಳಿಯೇ ಇಲ್ಲಿಯೂ ಉಂಟು.

ಔಂಧದ ಪಂತಪ್ರತಿನಿಧಿಯು ಬ್ರಾಹ್ಮಣನು, ಹಾಗು ಫಲಟಣದ ನಿಂಬಾಳಕರನು ಮರಾಠೆ ಜಾತಿಯವನು.

೯. ಸೊಲ್ಲಾಪುರ ಜಿಲ್ಹೆ—ಇದು ಅಹಮ್ಮದನಗರ ಜಿಲ್ಹೆಯ ದಕ್ಷಿಣಕ್ಕೆ, ಪುಣೆ ಸಾತಾರೆ ಜಿಲ್ಹೆಗಳ ಪೂರ್ವಕ್ಕಿರುತ್ತದೆ. ಬಾರ್ಶಿ ತಾಲೂಕು ಹೊರ್ತಾಗಿ ಇದರಲ್ಲಿ ಮಳೆ ಬಹಳ ಕಡಿಮೆ; ದೇಶವು ಹಾಳು ಇದ್ದ ಹಾಗೆ ಕಾಣುತ್ತದೆ. ಕೊಂಕಣ ದೇಶಗಳಲ್ಲಿ ನಡೆಯುವಂಥ ಭಾಷೆಗಳನ್ನೇ ಇಲ್ಲಿ ಆಡುತ್ತಾರೆ. ಈ ಜಿಲ್ಹೆಯ ಉತ್ತರ ಭಾಗದಲ್ಲಿ ಮಹಾರಾಷ್ಟ್ರ ಭಾಷೆ ನಡೆಯುತ್ತದೆ. ಮತ್ತು ದಕ್ಷಿಣ ಭಾಗದಲ್ಲಿ ಕನ್ನಡ ಭಾಷೆಯೂ ನಡೆಯುವದುಂಟು. ಒಕ್ಕಲತನವೇ ಜನರ ಮುಖ್ಯ ಉದ್ಯೋಗವು. ದೊಡ್ಡ ದೊಡ್ಡ ಪಟ್ಟಣಗಳಲ್ಲಿಯೂ ಗ್ರಾಮಗಳಲ್ಲಿಯೂ ನೇಕಾರಿಕೆ ನಡೆಯುತ್ತದೆ. ಇದರಲ್ಲಿ ೭ ತಾಲೂಕುಗಳುಂಟು; ಅವು—ಕರಮಾಳೆ, ಬಾರಸಿ, ಮಾಢೆ, ಸೊಲ್ಲಾಪುರ, ಪಂಢರಪುರ, ಸಾಂಗೋಲೆ, ಮಾಳಶಿರಸ.

ಸೊಲ್ಲಾಪುರದಲ್ಲಿ ( ಜನಸಂಖ್ಯೆ ೬೧,೨೮೧ ) ಚಲೋ ಸೀರೆಗಳು ಹುಟ್ಟುತ್ತವೆ. ಬಾರಸಿಯಲ್ಲಿ ( ಜನಸಂಖ್ಯೆ ೧೬,೧೨೬ ) ಅರಳೆಯ ವ್ಯಾಪಾರ ಬಹಳ ಸಾಗುತ್ತದೆ. ಪಂಢರಪುರ (ಜನಸಂಖ್ಯೆ ೧೬,೯೧೦) ದಲ್ಲಿ ಪಾಂಡುರಂಗನ ದೇವಾಲಯವು ಬಹು ಪ್ರಸಿದ್ಧವದೆ. ಇಲ್ಲಿ ಆಷಾಢ ಕಾರ್ತಿಕ ಮಾಸಗಳಲ್ಲಿ

ದೊಡ್ಡ ಜಾತ್ರೆ ಕೂಡುತ್ತದೆ. ಕರ್ಕಂಬ, ವೈರಾಗ, ಕರವಾಳೆ, ಮಾಢೆ, ಸಾಂಗೋಲೆ, ಮೊಹೋಳ, ಅಕಲೂಜ ಮುಂತಾದ ದೊಡ್ಡ ಗ್ರಾಮಗಳುಂಟು.

೧೦. ಅಕ್ಕಲಕೋಟೆಯ ಸಂಸ್ಥಾನ:–ಇದು ಸೊಲ್ಲಾಪುರ ಜಿಲ್ಹೆಯ ಆಗ್ನೇಯದಲ್ಲಿ ಸೊಲ್ಲಾಪುರದಿಂದ ೨೨ ಮೈಲು ಇರುತ್ತದೆ. ಈ ಸಂಸ್ಥಾನದ ಉತ್ತರ, ಪೂರ್ವ, ದಕ್ಷಿಣ ದಿಕ್ಕು ಗಳಲ್ಲಿ ನಿಜಾಮನ ರಾಜ್ಯವಿರುತ್ತದೆ. ಇಲ್ಲಿಯ ಭೂಮಿ ತಗ್ಗು ದಿನ್ನೆಯಾದದ್ದು; ಹೊಳೆಗಳು ಹಲವುಂಟು. ಮಳೆಯು ತಕ್ಕ ಮಟ್ಟಿಗೆ ಆಗುತ್ತದೆ. ಜನರ ಉದ್ಯೋಗಗಳು ಒಕ್ಕಲತನವೂ ಉರುಟು ಅರವಿಯ ನೇಕಾರಿಕೆಯೂ. ಇಲ್ಲಿ ಮರಾಠಿ ಕನ್ನಡ ಭಾಷೆಗಳು ನಡೆಯುತ್ತವೆ.

ಈ ಸಂಸ್ಥಾನವು ಮೊದಲು ಸಾತಾರೆಯ ಅರಸನ ರಾಜ್ಯ ದೊಳಗಿತ್ತು. ಈಗ ಇಂಗ್ಲೀಷರ ಕೈಕೆಳಗೆ ಇರುತ್ತದೆ. ಇಲ್ಲಿ ಯ ಅರಸು ಭೋಸಲೆ ಎಂಬ ಮನೆತನದವನು.

---

## ೮ ನೇ ಭಾಗ.

## ಮುಂಬಯಿ-ಕರ್ನಾಟಕ, ಅಥವಾ

## ದಕ್ಷಿಣ ಮಹಾರಾಷ್ಟ್ರ ದೇಶವೂ, ಕಾನಡಾ ಜಿಲ್ಹೆಯೂ.

ದಕ್ಷಿಣ ಮಹಾರಾಷ್ಟ್ರವೆಂಬ ಹೆಸರು ಹೊಸದಾದದ್ದು. ಮಹಾರಾಷ್ಟ್ರದೇಶದ ದಕ್ಷಿಣ ಭಾಗವೂ ಕರ್ನಾಟಕದ ಉತ್ತರ ಭಾಗವೂ ಕೂಡಿ ಈ ಪ್ರಾಂತವಾಗಿದೆ. ಮಹಾರಾಷ್ಟ್ರ ಹಾಗು ಕರ್ನಾಟಕ ಪ್ರಾಂತಗಳಲ್ಲಿ ಬೇರೆ ಬೇರೆ ಭಾಷೆಗಳಿಂ ದಲೇ ಭೇದವುಂಟಾಗಿದೆ. ಇದರ ಉತ್ತರ ಭಾಗದಲ್ಲಿ ಮಹಾ ರಾಷ್ಟ್ರ ಭಾಷೆಯೂ ದಕ್ಷಿಣ ಭಾಗದಲ್ಲಿ ಕನ್ನಡ ಭಾಷೆಯೂ ನಡೆಯುತ್ತವೆ. ಮೊದಲು ಕೃಷ್ಣೆಯ ದಕ್ಷಿಣದ ಪ್ರದೇಶಕ್ಕೆ ಕರ್ನಾಟಕವೆನ್ನುತ್ತಿದ್ದರು.

ಈ ಭಾಗದಲ್ಲಿ ಗುಡ್ಡಗಳುಳ್ಳ ಹಾಗು ಸಾಗುವಳಿಯಾಗ ದಂಥ ಭೂಮಿಯೇ ಇಲ್ಲೆಂದು ಹೇಳಬಹುದು. ಚನ್ನಾಗಿ ಸಾಗು ಮಾಡಿದ ಕರಿ ಭೂಮಿಯು ಬಹಳ ಉಂಟು.

೧. ವಿಜಾಪುರ ಜಿಲ್ಹೆ:—ಈ ಜಿಲ್ಹೆಗೂ ಸೊಲ್ಲಾಪುರ ಜಿಲ್ಹೆ ಅಕ್ಕಲಕೋಟೆಯ ಸಂಸ್ಥಾನಗಳಿಗೂ ನಡುವೆ ಭೀಮಾ ನದಿಯುಂಟು; ಇದರ ಪೂರ್ವಕ್ಕೆ ನಿಜಾಮನ ರಾಜ್ಯ; ದಕ್ಷಿಣಕ್ಕೆ ಧಾರವಾಡಜಿಲ್ಹೆ; ಪಶ್ಚಿಮಕ್ಕೆ ರಾಮದುರ್ಗ, ಮುಧೋಳ, ಜಮಖಂಡಿ, ಜತ್ತಿ ಎಂಬ ಸಂಸ್ಥಾನಗಳು ಉಂಟು. ಭೀಮೆಯ ಹೊರ್ತು ಈ ಜಿಲ್ಹೆಯಲ್ಲಿ ಬೇರೆ ಮೂರು ದೊಡ್ಡ ಹೊಳೆಗಳುಂಟು. ಅವುಗಳಲ್ಲಿ ಕೃಷ್ಣೆಯು ಮುಖ್ಯ; ಘಟಪ್ರಭೆ, ಮಲಾಪಹಾರಿ ಇವೆರಡು ಅದರ ಶಾಖೆಗಳು. ಭೂಮಿಯು ತಗ್ಗುದಿನ್ನೆಯಾದದ್ದು; ಈಚಲ ಗಿಡಗಳ ಹೊರ್ತು ಬೇರೆ ಗಿಡಗಳು ಇಲ್ಲೇ ಇಲ್ಲ. ಈ ಜಿಲ್ಹೆಯಲ್ಲಿ ೮ ತಾಲೂಕುಗಳುಂಟು; ಅವು.— ಬಾಗಲಕೋಟೆ, ಬಾದಾವಿ, ಹುನಗುಂದ, ಮುದ್ದೇಬಿಹಾಳ, ಸಿಂದಗಿ, ಬಾಗೇವಾಡಿ, ವಿಜಾಪೂರ, ಇಂಡಿ ಎಂಬವುಗಳು. ಇವಲ್ಲದೆ ಬೀಳಗಿ ಎಂಬ ಪೇಠೆಯುಂಟು.

ಜನರ ಮುಖ್ಯ ಉದ್ಯೋಗ ಒಕ್ಕಲತನ, ನೇಕಾರರೂ ಬಹು ಜನರುಂಟು; ಮುಖ್ಯ ಭಾಷೆ ಕನ್ನಡ; ಆದರೆ ಬ್ರಾಹ್ಮಣರಿಗೆ ಬಹುತರ ಮಹಾರಾಷ್ಟ್ರ ಭಾಷೆ ಬರುತ್ತದೆ. ತೀರ ಉತ್ತರದ ತಾಲೂಕಿನಲ್ಲಿ ಬಹುತರ ಮಹಾರಾಷ್ಟ್ರ ಭಾಷೆಯೇ ನಡೆಯುತ್ತದೆ. ಬಹು ಜನರು ಲಿಂಗವಂತರುಂಟು.

ಜಿಲ್ಹೆಯ ಮುಖ್ಯ ಸ್ಥಳವಾದ ವಿಜಾಪುರವು (ಜನಸಂಖ್ಯೆ ೧೧,೪೨೪) ಪೂರ್ವದ ಅದಿಲ್‌ಶಾಹಿಯ ರಾಜಧಾನಿಯು; ಇದರ ಕೋಟೆಯ ಸುತ್ತಳತೆ ೬ ವೈಲುಗಳಿಗಿಂತ ಹೆಚ್ಚದೆ. ಈಗ ಪಟ್ಟಣವು ಹಾಳಾಗಿದೆ. ಆದರೆ ನೋಡತಕ್ಕಂಥ ಸುಂದರವಾದ ಮಶೀದಿ ಮುಂತಾದ ಭವ್ಯ ಹಾಗು ಹಳೇ ಕಟ್ಟಡಗಳು ಬಹಳ ಉಂಟು. ಅಹಮ್ಮದಾಬಾದಿನಲ್ಲಿ ಹೊರ್ತಾಗಿ ಇಂಥಾ ಇಮಾರತುಗಳು ಎಲ್ಲಿಯೂ ಇಲ್ಲ. ಬಾಗಲಕೋಟೆ

(ಜನಸಂಖ್ಯೆ ೧೨,೮೫೦) ಯಲ್ಲಿ ಜವಳೀ ವ್ಯಾಪಾರ ನಡೆಯುತ್ತದೆ. ಗುಳೇದಗುಡ್ಡ (ಜನಸಂಖ್ಯೆ ೧೦,೬೪೮), ಇಲಕಲ್ಲ (ಜನಸಂಖ್ಯೆ ೯,೫೨೪) ಇವು ತಕ್ಕಮಟ್ಟಿಗೆ ದೊಡ್ಡ ಗ್ರಾಮಗಳವೆ. ಬಾದಾವಿಯ ಕೋಟೆ ಹೆಸರಾದದ್ದು; ಅಲ್ಲಿರುವ ಬನಶಂಕರಿಯ ಗುಡಿಯು ಬಹು ಪ್ರಸಿದ್ಧ, ಗುಳೇದಗುಡ್ಡದಲ್ಲಿ ಮೇಲಾದ ಖಣಗಳು ಹುಟ್ಟುತ್ತವೆ. ತಾಳೀಕೊಟೆಯಲ್ಲಿ ಸುಣ್ಣದ ಕಲ್ಲುಗಳು ದೊರೆಯುತ್ತವೆ.

೨. ವಿಜಾಪುರ ಜಿಲ್ಹೆಗೆ ಸೇರಿದ ಜಹಾಗೀರಗಳು—ಜತ್ತಿ-ಜತ್ತಿ ವಿಜಾಪುರ ಜಿಲ್ಹೆಯ ಪಶ್ಚಿಮಕ್ಕಿರುತ್ತದೆ. ಇದರ ಕ್ಷೇತ್ರಫಲ ೮೮೫ ಚಚ್ಚೌಕು ಮೈಲು,(ಜನಸಂಖ್ಯೆ೪೯,೪೮೬) ಈ ಸಂಸ್ಥಾನದ ಡಫಳೆ ಎಂಬ ಜಾಹಗೀರದಾರನು ಮಹಾರಾಷ್ಟ್ರನು. ಇವನು ಮೊದಲು ಸಾತಾರೆ ಅರಸನ ಕೈಕೆಳಗೆ ಇದ್ದನು. ಈಗ ಬ್ರಿಟಿಶರ ವಶದಲ್ಲಿದ್ದಾನೆ. ನೆರೆಯ ಜಿಲ್ಹೆಗಳಲ್ಲಿ ಹುಟ್ಟುವ ಧಾನ್ಯಗಳಲ್ಲದೆ ಈ ಸಂಸ್ಥಾನದಲ್ಲಿ ಸೋರುಪ್ಪು, ಕಬ್ಬಿಣಗಳು ದೊರೆಯುತ್ತವೆ. ವಿಜಾಪುರದ ಕಲೇಕ್ಟರನು ಪೊಲಿಟಿಕಲ್ ಏಜಂಟನ ಅಧಿಕಾರ ನೋಡುತ್ತಾನೆ.

೩. ಬೆಳಗಾವೀ ಜಿಲ್ಹೆ.—ಇದು ವಿಜಾಪುರ ಜಿಲ್ಹೆಯ ಪಶ್ಚಿಮದಲ್ಲಿ ಇರುತ್ತದೆ. ಇದರ ಪಶ್ಚಿಮಕ್ಕೆ ಗೋವೆ, ಸಾವಂತವಾಡಿ, ಕೊಲ್ಹಾಪುರ; ಉತ್ತರಕ್ಕೆ ಮಿರ್ಜಿ, ಸಾಂಗಲಿ, ಜತ್ತಿ ಸಂಸ್ಥಾನಗಳು; ಪೂರ್ವಕ್ಕೆ ಮುಧೋಳ, ಜಮಖಂಡಿ, ರಾಮದುರ್ಗ ಸಂಸ್ಥಾನಗಳುಂಟು. ಪಶ್ಚಿಮಭಾಗದ ಜನರು ಮಹಾರಾಷ್ಟ್ರ ಭಾಷೆಯನ್ನಾಡುವರು, ಉಳಿದವರೆಲ್ಲ ಕನ್ನಡಿಗರು, ದಕ್ಷಿಣ ಉತ್ತರ ಭಾಗದಲ್ಲಿ ಎರಡೂ ಭಾಷೆಗಳನ್ನಾಡುತ್ತಾರೆ. ಇದರಲ್ಲಿ ೮ ತಾಲೂಕುಗಳುಂಟು; ಅವು-ಬೆಳಗಾವಿ, ಚಿಕ್ಕೋಡಿ, ಖಾನಾಪುರ, ಗೋಕಾವಿ, ಅಥಣಿ, ಬೈಲಹೊಂಗಲ, ಪರಸಗಡ (ಸವದತ್ತಿ), ಹುಕ್ಕೇರಿ ಎಂಬವುಗಳುಂಟು. ಇವಲ್ಲದೆ ಮುರಗೋಡ, ಚಂದಗಡ ಎಂಬ ಮಹಾಲಗಳಿರುತ್ತವೆ.

ಉತ್ತರದಲ್ಲಿ ಕೃಷ್ಣೆಯು, ಮಧ್ಯದಲ್ಲಿ ಘಟಪ್ರಭೆ, ದಕ್ಷಿಣದಲ್ಲಿ ಮಲಾಪಹಾರಿ, ಇವೇ ಮುಖ್ಯ ಹೊಳೆಗಳು. ಉತ್ತರ ಪೂರ್ವ ಭಾಗಗಳ ಭೂಮಿ ಸಮನಾದದ್ದೂ ಬೆಳೆಯುಳ್ಳದ್ದೂ ಅದೆ. ದಕ್ಷಿಣ-ಪಶ್ಚಿಮಗಳಲ್ಲಿ ಗುಡ್ಡಗಳು ವಿಶೇಷ; ದಕ್ಷಿಣಕ್ಕೆ ಸಹ್ಯಾದ್ರಿಯ ಶಾಖೆಗಳು ನಡುನಡುವೆ ಹಬ್ಬಿವೆ. ಹಾಗು ಅವುಗಳ ಮೇಲೆ ಹಲವು ಕಡೆಯಲ್ಲಿ ದಟ್ಟವಾದ ಅಡವಿಯುಂಟು.

ಜನರ ಉದ್ಯೋಗಗಳು ಒಕ್ಕಲತನ, ನೂಲುವದು, ವಸ್ತ್ರ ನೇಯುವದು. ಕಟ್ಟಿಗೆ ಧಾತುಗಳ ಕೈಗಾರಿಕೆಯ ಕೆಲಸಗಳು. ವಸ್ತ್ರ ರೇಶಿಮೆಗಳ ವ್ಯಾಪಾರವು ಬಹಳ ನಡೆಯುತ್ತದೆ.

ಬೆಳಗಾಂವಿಯಲ್ಲಿ ೩೨,೬೯೭ ಜನರು ವಾಸಿಸುತ್ತಾರೆ. ಇಲ್ಲಿ ದಂಡಿನ ದೊಡ್ಡ ಛಾವಣಿಯುಂಟು. ಬೆಳಗಾವಿಯ ಹತ್ತರ ಶಹಾಪುರದಲ್ಲಿ (ಸಾಂಗಲಿಯವರದು) ಚಿನ್ನ, ಬೆಳ್ಳಿಗಳು, ವಸ್ತ್ರ ಪಾತ್ರೆಗಳು ಇವುಗಳ ವ್ಯಾಪಾರ ಬಹಳ ಸಾಗುತ್ತದೆ.

ಅಥಣಿಯಲ್ಲಿ ( ಜನಸಂಖ್ಯೆ ೧೧,೧೮೬ ) ಅರಳೆ, ಕಿರಾಣಿ ಮುಂತಾದವುಗಳ ವ್ಯಾಪಾರ ಬಹಳ ಸಾಗುತ್ತದೆ. ಸಂಕೇಶ್ವರದಲ್ಲಿಯೂ ವ್ಯಾಪಾರ ತಕ್ಕಮಟ್ಟಿಗೆ ನಡೆಯುತ್ತದೆ. ಇಲ್ಲಿ ಶಂಕರಾಚಾರ್ಯ ಸ್ವಾಮಿಗಳ ಮಠ ಉಂಟು. ಗೋಕಾವಿಯ (ಜನಸಂಖ್ಯೆ ೧೦,೩೦೭) ಬಣ್ಣದ ಸಾಮಾನುಗಳೂ ವಸ್ತ್ರಗಳೂ ಪಾತ್ರೆಗಳೂ ಪ್ರಸಿದ್ಧ; ಇಲ್ಲಿ ಘಟಪ್ರಭೆಯ ತಡಸಲು ಬಹು ದೊಡ್ಡದುಂಟು. ಸವದತ್ತಿಯಲ್ಲಿಯೂ (ಜನಸಂಖ್ಯೆ ೭,೧೧೩) ವ್ಯಾಪಾರ ಸ್ವಲ್ಪ ನಡೆಯುತ್ತದೆ. ಇದರ ಹತ್ತರ ಗುಡ್ಡದ ಮೇಲೆ ಎಲ್ಲಮ್ಮನ ದೇವಸ್ಥಾನವು ಬಹು ಪ್ರಸಿದ್ಧ; ಅಲ್ಲಿ ವರ್ಷಕ್ಕೆ ಎರಡು ಸಾರೆ ದೊಡ್ಡ ಜಾತ್ರೆಯಾಗುತ್ತದೆ. ಮುರಗೋಡದಲ್ಲಿ ಕರಳೆಯ ವಸ್ತ್ರಗಳು ಆಗುತ್ತವೆ. ನಿಪ್ಪಾಣಿ ( ಜನಸಂಖ್ಯೆ ೯,೭೭೭ ) ಕಿತ್ತೂರು, ಇವೆರಡು ಮೊದಲು ಪ್ರಖ್ಯಾತರಾದ ದೇಸಾಯಿಗಳ ಮುಖ್ಯ ಗ್ರಾಮಗಳು. ತಾವರಗಟ್ಟಿಯಲ್ಲಿ ತೊಲೆಗಳ ವ್ಯಾಪಾರವು ಬಹಳ ನಡಿಯುತ್ತದೆ. ಹೊಂಗಲ, ನಂದಗಡ, ಯಮಕನಮರ್ಡಿ ಮುಂತಾದ ಬೇರೆ ದೊಡ್ಡ ಗ್ರಾಮಗಳುಂಟು.

೪. ಕೊಲ್ಹಾಪುರ ಸಂಸ್ಥಾನ.—ಈ ಸಂಸ್ಥಾನವು ಬೆಳ ಗಾಂವಿಯ ಉತ್ತರ ವಾಯುವ್ಯ ದಿಕ್ಕುಗಳಲ್ಲಿ ವಾರಣಾನದಿಯ ದಕ್ಷಿಣಕ್ಕಿರುತ್ತದೆ. ಇದರ ಪಶ್ಚಿಮಕ್ಕೆ ಸಹ್ಯಾದ್ರಿಯುಂಟು; ಅದರಾಚೆಯಲ್ಲಿ ರತ್ನಾಗಿರಿ ಜಿಲ್ಹೆ, ಸಾವಂತವಾಡಿಯ ಸಂಸ್ಥಾನ ಇವುಗಳುಂಟು.

ಈ ಪ್ರಾಂತದಲ್ಲಿ ಮಳೆ ಬಹಳ ಆಗುತ್ತದೆ. ಪಂಚಗಂಗಾ ಮುಂತಾದ ಹೊಳೆಗಳ ತೀರದ ಪ್ರದೇಶವು ಬಹಳ ಬೆಳೆಯು ಳ್ಳದ್ದು; ಅಲ್ಲಿ ಎಲ್ಲ ವಿಧದ ಧಾನ್ಯಗಳು ಬೆಳೆಯುತ್ತವೆ.

ಒಕ್ಕಲತನ, ಉರುಟು ವಸ್ತ್ರ ನೇಯುವದು, ಮಣ್ಣಿನ ಪಾತ್ರೆ ಮಾಡುವದು. ಇವೇ ಮುಖ್ಯ ಜೀವನೋಪಾಯಗಳು. ಈ ಸಂಸ್ಥಾನದಲ್ಲಿ ಕಬ್ಬಿಣವು ಸ್ವಲ್ಪ ದೊರೆಯುತ್ತದೆ. ಇಲ್ಲಿಯ ಜನರಲ್ಲಿ ಸುಮಾರು ⅘ ಜನರು ಮಹಾರಾಷ್ಟ್ರ ಭಾಷೆಯನ್ನು ಆಡುತ್ತಾರೆ; ಉಳಿದವರು ಕನ್ನಡಿಗರು.

ಇಲ್ಲಿಯ ಅರಸನಿಗೆ ಛತ್ರಪತಿ ಎಂಬ ಪದವಿಯುಂಟು. ಇವನು ಶಿವಾಜಿಯ ವಂಶದ ಚಿಕ್ಕ ಮನೆತನದವನು. ಸಾತಾ ರೆಯ ಅರಸು ಹಿರೇ ಮನೆತನದವನು. ಕೊಲ್ಹಾಪುರದ ಅರ ಸನಿಗೆ ಮಹಾರಾಜನೆಂದೆನ್ನುವರು. ಈ ಸಂಸ್ಥಾನದ ಕೆಳಗೆ ಹಲವು ಚಿಕ್ಕ ಸಂಸ್ಥಾನಗಳಿರುತ್ತವೆ; ಅವುಗಳಲ್ಲಿ ವಿಶಾಲ ಗಡ, ಕಾಗಲ, ಬಾವಡೆ, ಇಚಲಕರಂಜಿ, ತೊರಗಲ್ಲು ಇವೇ ಮುಖ್ಯ. ಕೊಲ್ಹಾಪುರದಲ್ಲಿ ಅಂಬಾಬಾಯಿಯ ದೇವಸ್ಥಾನವು ಬಹು ಪ್ರಸಿದ್ಧ.

೫. ದಕ್ಷಿಣ ಮಹಾರಾಷ್ಟ್ರ ಜಾಹಗೀರುಗಳು.—ಈ ಸಂಸ್ಥಾನಗಳು ಮೊದಲು ಪೇಶ್ವೆಯವರ ಅಧಿಕಾರಕ್ಕೊಳಗಾ ಗಿದ್ದವು; ಈಗ ಇಂಗ್ಲಿಷ ಸರಕಾರಕ್ಕೆ ಕಪ್ಪ ಕೊಡುತ್ತವೆ. ಕೊಲ್ಹಾಪುರದ ರೆಸಿಡೆಂಟನೇ ಇವುಗಳ ಪೊಲಿಟಿಕಲ್ ಏಜಂಟನ ಕೆಲಸ ನೋಡುತ್ತಾನೆ. ಅವನಿಗೆ ಇಬ್ಬರು ಅಸಿಸ್ಟಂಟರುಂಟು.

## ಈ ಜಾಹಗೀರುಗಳ ವಿವರ.

| ಜಾಹಗೀರುಗಳು | ಕ್ಷೇ. ಚಚ್ಚೌಕಮೈಲು | ಜನಸಂಖ್ಯೆ |
|---|---|---|
| ೧. ಸಾಂಗಲಿ | ೮೯೬ | ೧,೯೬,೮೩೨ |
| ೨. ಜಮುಖಂಡಿ | ೪೯೨ | ೮೩,೯೧೭ |
| ೩. ಮಿರ್ಜ ( ಹಿರೇಮನೆತನ) | ೩೪೦ | ೬೯,೭೩೨ |
| ೪. ಮಿರ್ಜ (ಚಿಕ್ಕ ಮನೆತನ) | ೨೦೮ | ೩೦,೫೪೧ |
| ೫. ಕುರುಂದವಾಡ (ಹಿರೇ ಮನೆತನ) | ೧೮೨ | ೩೫,೧೮೭ |
| ೬. ಕುರುಂದವಾಡ (ಚಿಕ್ಕ ಮನೆತನ) | ೧೧೪ | ೨೫,೮೧೧ |
| ೭. ಮುಧೋಳ | ೩೬೨ | ೫೨,೧೬೩ |
| ೮. ರಾಮದುರ್ಗ | ೧೪೦ | ೨೯,೫೭೦ |
| | ೨,೭೩೪ | ೫,೨೩,೭೬೩ |

ಸಾಂಗಲಿ, ಜಮುಖಂಡಿ, ಮಿರ್ಜಿ, ಕುರುಂದವಾಡ ಈ ಸಂಸ್ಥಾನಗಳ ಒಡೆಯರು ಪಟವರ್ಧನರೆಂಬ ಬಾಹ್ಮಣ ರುಂಟು. ಮುಧೋಳದ ಅರಸು ಘೋರಪಡೆ ಎಂಬ ಮಹಾ ರಾಷ್ಟ್ರನು. ಅವನಿಗೆ ರಾಜೇಸಾಹೇಬನೆನ್ನುವರು. ರಾಮದು ರ್ಗದ ಜಾಹಗೀರದಾರನು ಭಾವೆ ಎಂಬ ಮನೆತನದ ಬ್ರಾಹ್ಮ ಣನು. ಪಟವರ್ಧನ ಸಂಸ್ಥಾನಿಕರ ಗ್ರಾಮಗಳು ಒಂದೇ ಕಡೆಯಲ್ಲಿಲ್ಲ. ಸಾಂಗಲೀ ಸಂಸ್ಥಾನದ ಮಂಗಳವೇಢೆ ಎಂಬ ತಾಲೂಕು ಪಂಢರಪುರದ ಹತ್ತರ ಭೀಮೆಯ ಧಡದಲ್ಲಿ, ಶಹಾಪುರದ ತಾಲೂಕು ಬೆಳಗಾಂವಿ ಜಿಲ್ಹೆಯಲ್ಲಿ, ಶಿರಹಟ್ಟಿಯ ತಾಲೂಕು ಧಾರವಾಡ ಜಿಲ್ಹೆಯಲ್ಲಿ ದಕ್ಷಿಣಕ್ಕೆ ತುಂಗಭ ದ್ರೆಯ ಮೇಲೆ ಇರುತ್ತದೆ.

ಈ ಸಂಸ್ಥಾನಗಳಲ್ಲಿಯು ಅರ್ಧಕ್ಕಿಂತ ಹೆಚ್ಚು ಜನರು ಕನ್ನಡ ಭಾಷೆಯನ್ನಾಡುತ್ತಾರೆ; ಉಳಿದವರು ಮರಾಠೀ ಭಾಷೆಯನ್ನಾಡುವರು. ಒಕ್ಕಲತನ ನೇಕಾರಿಕೆಗಳೇ ಜನರ ಮುಖ್ಯ ಉದ್ಯೋಗಗಳು. ಭೂಮಿ ಬೆಳೆಯುಳ್ಳದ್ದು; ಗುಡ್ಡಗಳು ಬಹಳಲ್ಲ.

೬. ಧಾರವಾಡ ಜಿಲ್ಹೆ.—ಈ ಇಲಾಖೆಯ ಆಗ್ನೇಯಕ್ಕೆ, ಬೆಳಗಾಂವಿ-ವಿಜಾಪುರ ಜಿಲ್ಹೆಗಳ ದಕ್ಷಿಣಕ್ಕಿರುತ್ತದೆ. ಈ ಜಿಲ್ಹೆಯ ಪಶ್ಚಿಮ ಭಾಗದಲ್ಲಿ ತಗ್ಗು ದಿನ್ನೆಗಳೂ ಗುಡ್ಡಗಳೂ ಉಂಟು. ಆದರೆ ಪೂರ್ವ ಭಾಗವು ಬಹುತರ ಸವನೆಲವುಳ್ಳದ್ದು; ಅತ್ಯುತ್ತಮ ಬೆಳೆಯುಳ್ಳ ಎರೇ ಭೂಮಿಯೇ ವಿಶೇಷ. ಈ ಜಿಲ್ಹೆಯಲ್ಲಿ ೧೧ ತಾಲೂಕುಗಳುಂಟು. ಅವು-ಧಾರವಾಡ, ನವಲಗುಂದ, ರೋಣ, ಗದಗು, ಹುಬ್ಬಳ್ಳಿ, ಕಲಘಟಗಿ, ಬಂಕಾಪೂರ, ಕರ್ಜಗಿ, ಹಾನಗಲ್ಲು, ರಾಣಿಬಿನ್ನೂರು, ಕೋಡ. ಇವಲ್ಲದೆ ನರಗುಂದ, ಮುಂಡರಗಿ ಎಂಬ ೨ ಪೇಟೆಗಳುಂಟು.

ಮುಖ್ಯ ಹೊಳೆಗಳು ಉತ್ತರ ಭಾಗದಲ್ಲಿ ಮಲಾಪಹಾರಿಯು; ಮಧ್ಯ ಭಾಗದಲ್ಲಿ ವರದಾ ನದಿಯು ಪೂರ್ವಕ್ಕೆ ಹರಿದು ತುಂಗಭದ್ರೆಗೆ ಕೂಡುತ್ತದೆ; ಪೂರ್ವ ಮೇರೆಯಲ್ಲಿ ತುಂಗಭದ್ರೆಯು, ಮೈಸೂರ ಸೀಮೆಯಿಂದ ಉತ್ತರಕ್ಕೆ ಹರಿದು ಬಂದು ನಿಜಾಮನ ರಾಜ್ಯದೊಳಗೆ ರಾಯಚೂರಿನ ಆಚೆಗೆ ಕೃಷ್ಣೆಗೆ ಕೂಡುತ್ತದೆ.

ಇಲ್ಲಿಯ ಜನರ ಭಾಷೆ ಕನ್ನಡ, ಲಿಂಗವಂತರೇ ಮುಖ್ಯ ನಿವಾಸಿಗಳು. ಒಕ್ಕಲತನವೇ ಜನರ ಮುಖ್ಯ ಜೀವನೋಪಾಯವು.

ಧಾರವಾಡವು (ಜನಸಂಖ್ಯೆ ೩೬,೧೯೧) ಜಿಲ್ಹೆಯ ಮುಖ್ಯ ಗ್ರಾಮವು, ಹುಬ್ಬಳ್ಳಿಯಲ್ಲಿ (ಜನಸಂಖ್ಯೆ ೫೬,೬೭೭) ಮೇಲಾದ ನೂಲು ರೇಶಿಮೆ ವಸ್ತ್ರಗಳೂ ಪಾತ್ರೆಗಳೂ ಹುಟ್ಟುತ್ತವೆ. ಇದು ಬುನಾದಿಯಿಂದ ಹೆಸರಾದ ವ್ಯಾಪಾರ ಸ್ಥಳವು. ಗದಗು (ಜನಸಂಖ್ಯೆ ೧೭,೦೦೧), ರಾಣೀಬಿನ್ನೂರ (ಜನಸಂಖ್ಯೆ ೧೦,೨೨೨), ನರಗುಂದ (ಜನಸಂಖ್ಯೆ ೭,೮೭೪), ಹಾವೇರಿ, ಇವು ಬೇರೆ ವ್ಯಾಪಾರ ಸ್ಥಳಗಳು; (ಗದಗ) ಬೆಟಗೇರಿಯಲ್ಲಿ ನೂ ಮೇಲಾದ ವಸ್ತ್ರಗಳು ಹುಟ್ಟುತ್ತವೆ. ನರಗುಂದವು ಮೊದಲು ಭಾವೆ ಎಂಬ ಬ್ರಾಹ್ಮಣನ ಸಂಸ್ಥಾನವಿತ್ತು. ಶಿರಹಟ್ಟಿ, ಲಕ್ಷ್ಮೇಶ್ವರ, ಕುಂದಗೋಳ ಇವು ಕ್ರಮವಾಗಿ ಸಾಂಗಲಿ, ಮಿರಜ, ಜಮಖಂಡಿ ಈ ಸಂಸ್ಥಾನಗಳಿಗೆ ಸೇರಿದ ತಾಲೂಕುಗಳು.

ಯಮನೂರು ಪ್ರಸಿದ್ಧ ಪೀರನ ಸ್ಥಾನವು. ಬೇರೆ ದೊಡ್ಡ ಗ್ರಾಮಗಳು, (ಉಪ್ಪಿನ) ಬೆಟಗೇರಿ, ಗಜೇಂದ್ರಗಡ ಇತ್ಯಾದಿ.

೭. ಸವಣೂರ ಸಂಸ್ಥಾನ.—ಧಾರವಾಡದ ಪೂರ್ವಕ್ಕೆ ಈ ಜಾಹಗೀರು ಇರುತ್ತದೆ. ಇಲ್ಲಿಯ ಜಾಹಗೀರದಾರನು ನಬಾಬನೆಂಬ ಪಠಾಣ ಕುಲದ ಮುಸಲ್ಮಾನನು. ಅವನು ಮೊದಲು ಪೇಶ್ವೇ ಸರಕಾರಕ್ಕೆ ಅಂಕಿತನಾಗಿದ್ದನು. ಮುಖ್ಯ ಗ್ರಾಮ ಸವಣೂರು ತಕ್ಕಮಟ್ಟಿಗೆ ದೊಡ್ಡದಿರುತ್ತದೆ. ಧಾರವಾಡದ ಕಲೆಕ್ಟರನು ಈ ಸಂಸ್ಥಾನದ ಏಜಂಟನು. ಅವನಿಗೆ ನಬಾಬನು ಅಂಕಿತನಾಗಿರುವನು.

೮. ಕಾನಡಾ ಜಿಲ್ಹೆ—ಈ ಜಿಲ್ಹೆಯನ್ನು ಮದ್ರಾಸ ಸರಕಾರದವರು ಸನ್ ೧೮೬೧ ನೇ ವರ್ಷ ಮುಂಬಯಿ ಸರಕಾರಕ್ಕೆ ಕೊಟ್ಟರು. ಇದು ಬೆಳಗಾವಿಯ ದಕ್ಷಿಣಕ್ಕೂ ಧಾರವಾಡ ಜಿಲ್ಹೆಯ ಪಶ್ಚಿಮಕ್ಕೂ ಇರುತ್ತದೆ. ಸಹ್ಯಾದ್ರಿಯ ಕೆಳಗೂ ಮೇಲೆಯೂ ಈ ಜಿಲ್ಹೆಯ ತಾಲೂಕುಗಳಿರುತ್ತವೆ. ಇದರಲ್ಲಿ ೮ ತಾಲೂಕುಗಳುಂಟು; ಅವು—ಕಾರವಾರ, ಅಂಕೋಲಾ, ಕುಮಟಾ, ಹೊನ್ನಾವರ, ಸಿದ್ದಾಪುರ, ಶಿರಶಿ, ಯಲ್ಲಾಪುರ, ಹಳ್ಳಿಯಾಳ. ಕಡೆಯ ೪ ತಾಲೂಕುಗಳು ಘಟ್ಟದ ಮೇಲೆ ಉಂಟು. ಇವಲ್ಲದೆ ಭಟಕಳ, ಮುಂಡಗೋಡ, ಸುಪಾ ಎಂಬ ಪೇಠೆಗಳಿರುತ್ತವೆ.

ಸಹ್ಯಾದ್ರಿಗೂ ಸಮುದ್ರಕ್ಕೂ ನಡುವೆ ಇರುವ ಕೊಂಕಣಪಟ್ಟಿಯ ಅಗಲು ವಾಡಿಕೆಯಾಗಿ ಇರುವಷ್ಟಕ್ಕಿಂತ ಕಾನಡಾ ಜಿಲ್ಹೆಯಲ್ಲಿ ಕಡಿಮೆ ಇರುತ್ತದೆ. ಈ ಅಗಲಳತೆ ೫ ರಿಂದ ೧೫ ಮೈಲುಗಳ ವರೆಗೆ ಇರುತ್ತದೆ. ಘಟ್ಟದ ಮೇಲೆಯೂ ...ಗೂ ಇರುವ ನಿಬಿಡವಾದ ಅರಣ್ಯವು ಆಶ್ಚರ್ಯಕರ ...ದದ್ದು. ಈ ಜಿಲ್ಹೆಯಲ್ಲಿ ೯ ಸಣ್ಣ ನದಿಗಳುಂಟು. ...ವುಗಳಲ್ಲಿ ವರದಾ, ಶರಾವತಿ, ಇವೆರಡು ಮುಖ್ಯ. ಹೊನ್ನಾವರದ ಪೂರ್ವಕ್ಕೆ ಗೆರಸಪ್ಪೆಯ ಆಚೆಗೆ ಶರಾವತೀ ಹೊಳೆಯು ೮೫೦ ಫೂಟುಗಳ ಎತ್ತರದಿಂದ ಬಿದ್ದು, ನಾಲ್ಕು ಬಹು ರಮಣೀಯವಾದ ಧಡಸಲಗಳನ್ನುಂಟುಮಾಡಿದೆ.

ಈ ಜಿಲ್ಹೆಯಲ್ಲಿ ಕನ್ನಡ ಭಾಷೆಯೇ ಮುಖ್ಯ; ಆದರೆ ಕೊಂಕಣೀ ಭಾಷೆಯು ಹೆಚ್ಚಾಗಿ ಸಮುದ್ರಥಡದ ಪ್ರದೇಶಗಳಲ್ಲಿ ನಡೆಯುತ್ತದೆ; ಒಕ್ಕಲತನ, ಮೀನ ಹಿಡಿಯುವದು, ಕೈಗಾರಿಕೆ, ಇವೇ ಇಲ್ಲಿಯ ನಿವಾಸಿಗಳ ಮುಖ್ಯ ಜೀವನೋಪಾಯಗಳು. ಈ ಜಿಲ್ಹೆಯಲ್ಲಿ ಹುಟ್ಟುವ ಶ್ರೀಗಂಧದ ಸಾಮಾನುಗಳು ಬಹಳ ಪ್ರಸಿದ್ಧ

ಹುಟ್ಟುವಳಿಗಳು—ಘಟ್ಟದ ಕೆಳಗೆ ಮುಖ್ಯ ಧಾನ್ಯ ಅಕ್ಕಿ; ಮೇಲೆ ಗೋಧಿ ಕಡ್ಲೆಗಳೂ ತಕ್ಕಮಟ್ಟಿಗೆ ಬೆಳೆಯುತ್ತವೆ. ಬೇರೆ ಬಗೆಯ ಸಸ್ಯಾದಿಗಳಲ್ಲಿ ತೆಂಗು, ಅಡಿಕೆ, ಯಾಲಕ್ಕಿ, ಮೆಣಸುಗಳು ಮುಖ್ಯ. ಸಹ್ಯಾದ್ರಿಯಲ್ಲಿ ದಟ್ಟಾಗಿ ಬೆಳೆದ ಅಡವಿಯಲ್ಲಿ ತೇಗು, ಮತ್ತಿ, ಹೊನ್ನಿ, ಶ್ರೀಗಂಧ, ಸಿಸುವು ಮೊದಲಾದ ಮರಗಳು ಹೇರಳವಾಗಿ ಬೆಳೆಯುವದರಿಂದ, ಇವುಗಳ ವ್ಯಾಪಾರವು ಹಳ್ಳಿಯಾಳ, ಯಲ್ಲಾಪುರಗಳಲ್ಲಿ ಸರಕಾರೀ ಅಧಿಕಾರಿಗಳ ಮುಖಾಂತರವಾಗಿ ಬಹಳ ನಡೆಯುತ್ತದೆ. ಅಡವಿಯಲ್ಲಿ ಅಳಲೇಕಾಯಿ, ಅಂಟಾಳಕಾಯಿ, ತಾರೀಕಾಯಿ, ಶೀಗೀಕಾಯಿ ಮುಂತಾದ ಉಪಯುಕ್ತ ಫಲಗಳು ಹೇರಳವಾಗಿ ಬೆಳೆಯುತ್ತವೆ.ಜೇನತುಪ್ಪ ಬಹಳ ಹುಟ್ಟುತ್ತದೆ.

ಕಾರವಾರ (ಜನಸಂಖ್ಯೆ ೧೩ ೭೬೧); ಕುಮಟಾ (ಜನಸಂಖ್ಯೆ ೧೦೬೨೮); ಹೊನ್ನಾವರ (ಜನಸಂಖ್ಯೆ ೬,೭೫೮) ಈ ಮೂರು ಬಂದರಗಳು ವ್ಯಾಪಾರಕ್ಕಾಗಿ ಪ್ರಸಿದ್ಧ. ಈ ಇಲಾಖೆಯಲ್ಲಿ ಮುಂಬಯಿ ಕರಾಚಿಗಳು ಹೊರ್ತಾಗಿ ಕಾರವಾರ ಬಂದರವೇ ಮಳೆಗಾಲದಲ್ಲಿ ಹಡಗಗಳಿಗೆ ಸುರಕ್ಷಿತವಾದ ಆಶ್ರಯಸ್ಥಾನವು. ಇದು ಒಳಗಡೆಯಲ್ಲಿ ... . ಶಿರಶಿಯು ದೊಡ್ಡ ವ್ಯಾಪಾ... ಕ್ಕಿ, ಮೆಣಸು ಇವು ಗಳ ... ಸ್ಥಾದೆ, ಬನೋ... ಗಳು ... ದೇವಾಲಯಗಳ ಪ್ರಸಿದ್ಧ ... ಕ್ಷೇತ್ರವು. ಭಟಕಳ, ಅಂಕೋ... ದೊಡ್ಡಗ್ರಾಮುಗಳು ಕೆಲವುಂಟು.



ಸಮಾಪ್ತ

ಸರಕಾರದವರಿಂದ ಮಂಜೂರ ಮಾಡಲ್ಪಟ್ಟ
ಕಾಣಿಸಿದ ಪುಸ್ತಕಗಳು ನಮ್ಮಿಂದ ಪ್ರಸಿದ್ಧ

---

೧. ಭೂಗೋಲವಿದ್ಯೆ. ೩ ನೇ ಭಾಗ.

೨. ಲಘುವ್ಯಾಕರಣ.

೩. ಮುಂಬಯಿ ಇಲಾಖೆಯ ಭೂಗೋಲ ...

---

ಇವುಗಳ ಹೊರತು ನಮ್ಮ ಕಡೆಗೆ ಎಲ್ಲ ತರದ ...
ಕನ್ನಡ, ಇಂಗ್ಲೀಷ, ಮರಾಠೀ, ಗುಜರಾಥೀ, ಹಿಂದು...
ನಾನಾತರದ ಪುಸ್ತಕಗಳು, ಮತ್ತು ಸಂಸ್ಕೃತ, ಪ್ರಾ...
ಗಳು ಯೋಗ್ಯ ಕ್ರಯಕ್ಕೆ ದೊರೆಯುವವು.

ಅಬಾಜೀ ರಾಮಚಂದ್ರ ...
ಶ್ರೀರಾಮತತ್ವ-ಪ್ರಕಾಶ ಛಾಪಖಾನೆ ...

